ಪ್ರಾಥಮಿಕ ಮಾಧ್ಯಮಿಕ ಶಾಲೆಗಳಿಗಾಗಿ

ಪಠ್ಯ (ಟೆಕ್ಸ್ಟ) ಪುಸ್ತಕವೆಂದು ಮಂಜೂರಾದ

೧ನೆಯ ಭಾಗ



# ನುಡಿಗನ್ನಡಿ










ಮ. ಪ್ರ. ಪೂಜಾರ.

# ಮುನ್ನುಡಿ

<***>

ಕೆಳಗಿನ ತರಗತಿಗಳಿಗೆ ಆರಂಭದ ವ್ಯಾಕರಣವು—ಕಲಿಸುವ ಪದ್ಧತಿಯನ್ನನುಸರಿಸಿ ಬರೆದದ್ದು—ಬೇಕಾಗಿದೆಯೆಂದು ಹಲವು ಜನ ನನ್ನ ವ್ಯವಸಾಯಬಂಧುಗಳು ಸೂಚಿಸಿದುದರಿಂದ ಈ ಪುಸ್ತಕವು ಪ್ರಕಟಿಸಲ್ಪಟ್ಟದೆ.

ಈ ಪುಸ್ತಕದ ಹಸ್ತಲಿಖಿತ ಪ್ರತಿಯನ್ನು ಓದಿ ದಯೆಯಿಟ್ಟು ಹಲವು ಉಪಯುಕ್ತ ಸೂಚನೆಗಳನ್ನು ಮಾಡಿದ ರಾ. ಸಾ. ವ್ಹಿ. ಎನ್. **ಮುಗದಾಳ** ಬಿ. ಎ. ಹೆ. ಮಾ. ಟ್ರೇನಿಂಗ್ ಸ್ಕೂಲ್ ಈ ಮಹನೀಯರ, ಮತ್ತು ನನ್ನ ವ್ಯವಸಾಯಬಂಧುಗಳಾದ ಶ್ರೀ. ಎನ್. ವ್ಹಿ. **ಕುರಡಿ**, ಹೆ. ಮಾಸ್ತರ ಪ್ರ್ಯಾಕ್ಟಿಸಿಂಗ್ ಸ್ಕೂಲ್ ಇವರ ಉಪಕಾರವು ಚಿರಸ್ಮರಣೀಯವಾಗಿದೆ.

ತಾ. ೨೦-೪-೧೯೩೩
ಧಾರವಾಡ

—ಪೂ

ಹಿಂದಿನ ಆವೃತ್ತಿಯ ಪುನರ್ಮುದ್ರಣ



ಪ್ರಾಥಮಿಕ, ಮಾಧ್ಯಮಿಕ, ಶಾಲೆಗಳ ಕೆಳಗಿನ ಇಯತ್ತೆಗಳಿಗಾಗಿ



೧ನೆಯ ಭಾಗ

# ಕನ್ನಡ ನುಡಿಗನ್ನಡಿ

( ವ್ಯಾಕರಣದ ಆರಂಭದ ಪಾಠಗಳು. )

ಇದನ್ನು



ಮಹಾದೇವ ಪ್ರಭಾಕರ ಪೂಜಾರ,

ಕನ್ನಡ ಪಂಡಿತ, ಟ್ರೇನಿಂಗ್ ಕಾಲೇಜ್, ಧಾರವಾಡ

ಇವರು ರಚಿಸಿದರು.

---



---

೧೯೪೪.

ಬೆಲೆ : ೦-೬-೬

# ಪರಿವಿಡಿ.

## ೧ ನೆಯ ಖಂಡ.



## ೨ ನೆಯ ಖಂಡ.

ಕನ್ನಡ

# ಸುಡಿಗನ್ನಡಿ

(೧ನೆಯ ಭಾಗ)

(ವ್ಯಾಕರಣದ ಆರಂಭದ ಪಾಠಗಳು)



## ೧. ವಾಕ್ಯ

**೧. ಸೂರ್ಯನು ಬರುತ್ತಾನೆ. ೨. ನೀರು ಹರಿಯುವದು.**
**೩. ಸಾವಿತ್ರಿ ಸಾಲೆಗೆ ಹೋದಳು.**

ಇವು ಮಾತುಗಳು. ೧ನೆಯ ಮಾತಿನಲ್ಲಿ ಸೂರ್ಯನು ಏನು ಮಾಡುತ್ತಾನೆ ಎಂಬುದು ಹೇಳಿದೆ. ೨ನೆಯ ಮಾತಿನಲ್ಲಿ ನೀರು ಏನಾಗುವದು ಎಂಬುದು ಹೇಳಿದೆ. ೩ನೆಯ ಮಾತಿನಲ್ಲಿ ಸಾವಿತ್ರಿ ಏನು ಮಾಡಿದಳೆಂಬುದು ಹೇಳಿದೆ.

ಇಂಥ ಹಲವು ಮಾತುಗಳನ್ನು ನಾವು ಬಾಯಿಂದ ಆಡುವೆವು; ಎರಡನೆಯವರು ಆಡುವದನ್ನು ಕೇಳುವೆವು; ಪುಸ್ತಕಗಳಲ್ಲಿ ಓದುವೆವು.

ಕೆಳಗಿನ ಕಥೆಯಲ್ಲಿ ಹಲವು ಮಾತುಗಳಿರುವವು; ಗೆರೆ ಹಾಕಿದಲ್ಲಿ ಒಂದೊಂದು ಮಾತು ಮುಗಿಯುವದು:—

ಅಡವಿಯಲ್ಲಿ ಒಂದು ನರಿ ಇತ್ತು । ಅದು ಒಂದು ದಿವಸ ಊರ ಬಳಿಯ ತೋಟದೊಳಗೆ ಹೋಯಿತು । ಅದು ಅಲ್ಲಿ ಒಂದು ದ್ರಾಕ್ಷೆಯ ಬಳ್ಳಿಯ ಹಂದರವನ್ನು ಕಂಡಿತು । ಆ ಹಂದರವು ಬಹಳ ಎತ್ತರವಾಗಿತ್ತು । ನರಿಗೆ ದ್ರಾಕ್ಷೆಯ ಗೊಂಚಲು ನಿಲುಕಲಿಲ್ಲ । ಆಗ ನರಿ ಹೀಗೆ ನುಡಿಯಿತು । ದ್ರಾಕ್ಷೆಯ ಹಣ್ಣು ಹುಳಿ ಇರುವವು । ಇವನ್ನು ನಾನು ತಿನ್ನುವದಿಲ್ಲ.

# ಪರಿವಿಡಿ.

**ಕನ್ನಡ**

# ನುಡಿಗನ್ನಡಿ

(೧ನೆಯ ಭಾಗ)

(ವ್ಯಾಕರಣದ ಆರಂಭದ ಪಾಠಗಳು)



## ೧. ವಾಕ್ಯ

**೧. ಸೂರ್ಯನು ಬರುತ್ತಾನೆ. ೨. ನೀರು ಹರಿಯುವದು.**
**೩. ಸಾವಿತ್ರಿ ಸಾಲೆಗೆ ಹೋದಳು.**

ಇವು ಮಾತುಗಳು. ೧ನೆಯ ಮಾತಿನಲ್ಲಿ ಸೂರ್ಯನು ಏನು ಮಾಡುತ್ತಾನೆ ಎಂಬುದು ಹೇಳಿದೆ. ೨ನೆಯ ಮಾತಿನಲ್ಲಿ ನೀರು ಏನಾಗುವದು ಎಂಬುದು ಹೇಳಿದೆ. ೩ನೆಯ ಮಾತಿನಲ್ಲಿ ಸಾವಿತ್ರಿ ಏನು ಮಾಡಿದಳೆಂಬುದು ಹೇಳಿದೆ.

ಇಂಥ ಹಲವು ಮಾತುಗಳನ್ನು ನಾವು ಬಾಯಿಂದ ಆಡುವೆವು; ಎರಡನೆಯವರು ಆಡುವದನ್ನು ಕೇಳುವೆವು; ಪುಸ್ತಕಗಳಲ್ಲಿ ಓದುವೆವು.

ಕೆಳಗಿನ ಕಥೆಯಲ್ಲಿ ಹಲವು ಮಾತುಗಳಿರುವವು; ಗೆರೆ ಹಾಕಿದಲ್ಲಿ ಒಂದೊಂದು ಮಾತು ಮುಗಿಯುವದು:—

ಅಡವಿಯಲ್ಲಿ ಒಂದು ನರಿ ಇತ್ತು। ಅದು ಒಂದು ದಿವಸ ಊರ ಬಳಿಯ ತೋಟದೊಳಗೆ ಹೋಯಿತು। ಅದು ಅಲ್ಲಿ ಒಂದು ದ್ರಾಕ್ಷೆಯ ಬಳ್ಳಿಯ ಹಂದರವನ್ನು ಕಂಡಿತು। ಆ ಹಂದರವು ಬಹಳ ಎತ್ತರವಾಗಿತ್ತು। ನರಿಗೆ ದ್ರಾಕ್ಷೆಯ ಗೊಂಚಲು ನಿಲುಕಲಿಲ್ಲ। ಆಗ ನರಿ ಹೀಗೆ ನುಡಿಯಿತು। ದ್ರಾಕ್ಷೆಯ ಹಣ್ಣು ಹುಳಿ ಇರುವವು। ಇವನ್ನು ನಾನು ತಿನ್ನುವದಿಲ್ಲ.

**ಕೆಳಗಿನ ಮಾತುಗಳು ನೀವು ಓದಿದ ಪುಸ್ತಕದೊಳಗಿನವು;**
**ಈ ಗುರುತನ್ನು ಹಾಕಿದಲ್ಲಿ ಒಂದೊಂದು ಮಾತು ಮುಗಿಯುವದು.**

ಒಂದು ಊರಲ್ಲಿ ಕುಂಜಬಿಹಾರಿ ಎಂಬ ಕೂಲಿಕಾರನಿದ್ದನು. ಅವನು ಐದಾರು ಸಣ್ಣ ಸಣ್ಣ ಮಕ್ಕಳನ್ನಿಟ್ಟುಕೊಂಡು ಬಡತನದಿಂದ ಸಂಸಾರ ಮಾಡುತ್ತಿದ್ದನು. ಹಿರಿಯ ಮಗನಾದ ಗೋಕುಲನೆಂಬವನು ಹದಿಮೂರು ವರ್ಷದವನಿದ್ದನು. ಒಂದು ದಿನ ನೆರೆಮನೆಯ ಒಬ್ಬ ಗೃಹಸ್ಥನು ಆ ಹುಡುಗನನ್ನು ಒಂದು ಕೆಲಸದ ಸಲುವಾಗಿ ಬೇರೂರಿಗೆ ಕಳುಹಿದನು.

**ಇಂಥ ಮಾತುಗಳಿಗೆ ವಾಕ್ಯವೆಂಬ ಹೆಸರು.**

---

## ಅಭ್ಯಾಸವೂ ಪ್ರಶ್ನೆಗಳೂ

೧. ಕೆಳಗಿನ ಕಥೆಯಲ್ಲಿ ಒಂದೊಂದು ಮಾತು ಮುಗಿಯುವಲ್ಲಿ ಈ ಗುರುತನ್ನು ಹಾಕಿ ತೋರಿಸಿರಿ :—

ಒಂದು ಮರದ ಮೇಲೆ ಕೆಲವು ಪಾರಿವಾಳಗಳು ಇದ್ದವು ಆ ಮರಕ್ಕೆ ಒಂದು ಕಾಗೆ ಬಂದಿತು ಕಾಗೆಯು ತನ್ನ ಮೈಯನ್ನು ಬೆಳ್ಳಗೆ ಮಾಡಿಕೊಂಡಿತ್ತು ಅದರಿಂದ ಪಾರಿವಾಳಗಳಿಗೆ ಕಾಗೆಯ ಗುರುತು ಹತ್ತಲಿಲ್ಲ ಕಾಗೆಯು ತನ್ನ ಕಾಯಕವನ್ನು ನಡೆಸಿತು ಅದು ಪಾರಿವಾಳಗಳ ಮರಿಗಳನ್ನು ತಿಂದಿತು ಅವುಗಳ ತತ್ತಿಗಳನ್ನು ತಿಂದಿತು ಪಾರಿವಾಳಗಳಿಗೆ ಸಂಶಯವು ಬಂದಿತು ಒಂದು ದಿನ ಕಾಗೆ ಕಾ ಕಾ ಎಂದು ಕೂಗಿತು ಆಗ ಪಾರಿವಾಳಗಳಿಗೆ ಕಾಗೆಯ ಗುರುತು ಹತ್ತಿತು ಕೂಡಲೆ ಪಾರಿವಾಳಗಳು ಅದನ್ನು ಓಡಿಸಿದವು ಕಾಗೆಯು ತನ್ನ ಹಿಂಡಿಗೆ ಹೋಯಿತು ಈ ಬಿಳಿಯ ಬಣ್ಣದ ಕಾಗೆಯನ್ನು ಆ ಕಾಗೆಗಳೂ ಓಡಿಸಿದವು.

೨. ನೀವು ಕೇಳಿದ ಯಾವದೊಂದು ಕಥೆಯೊಳಗಿನ ಒಂದೊಂದು ವಾಕ್ಯವನ್ನು ಹೇಳಿರಿ. ೩. ನಿಮ್ಮ ಆಟದೊಳಗಿನ ಒಂದೊಂದು ಮಾತನ್ನು ಹೇಳಿರಿ. ೪. ನಿಮ್ಮ ಓದುವ ಪುಸ್ತಕದೊಳಗಿನ ಒಂದೊಂದು ವಾಕ್ಯವನ್ನು ಹೇಳಿರಿ. ೫. ನಿಮಗೆ ಬರುವ ಒಂದು ಕಥೆಯನ್ನು ಬರೆದು ಅದರಲ್ಲಿ ಒಂದೊಂದು ಮಾತು ಮುಗಿದಲ್ಲಿ (•) ಈ ಗುರುತು ಹಾಕಿರಿ. ೬. ವಾಕ್ಯವೆಂದರೇನು ?

## ೨. ಪದ

| | | | |
|---|---|---|---|
| ೧. | ಕುದುರೆ | ಓಡುತ್ತದೆ. | |
| ೨. | ಹಕ್ಕಿಗಳು | ಮುಗಿಲಲ್ಲಿ | ಹಾರಾಡುತ್ತವೆ. |
| ೩. | ಗಾಳಿಯಿಂದ | ಗಿಡಗಳ | ಎಲೆಗಳು ಉದಿರುವವು |

೧ನೆಯ ವಾಕ್ಯದಲ್ಲಿ ಎರಡು ಭಾಗಗಳಿರುವವು. ಅವು ಬಿಡಿಸಿ ಬರೆದಿವೆ. ಕುದುರೆ ಎಂಬದು ಒಂದು; ಓಡುತ್ತದೆ ಎಂಬದು ಇನ್ನೊಂದು. ೨ನೆಯ ವಾಕ್ಯದಲ್ಲಿ ಹಕ್ಕಿಗಳು, ಮುಗಿಲಲ್ಲಿ, ಹಾರಾಡುತ್ತವೆ ಎಂಬ ಮೂರು ಭಾಗಗಳಿರುವವು. ೩ನೆಯ ವಾಕ್ಯದಲ್ಲಿ ಎಷ್ಟು ಭಾಗಗಳು ಇರುವವು? ಎಣಿಸಿರಿ.

ವಾಕ್ಯಗಳಲ್ಲಿ ಇಂತಹ ಹಲವು ಸಣ್ಣ ಭಾಗಗಳಿರುವವು. ಈ ಸಣ್ಣ ಭಾಗಗಳಿಗೆ **ಪದ** ಎಂಬ ಹೆಸರು.

### ಅಭ್ಯಾಸ

ಕೆಳಗೆ ಬರೆದ ವಾಕ್ಯಗಳಲ್ಲಿ ಪದಗಳನ್ನು ಬೇರೆಬೇರೆಯಾಗಿ ಹೇಳಿರಿ ಮತ್ತು ಎಣಿಸಿರಿ.

೧. ಸೀತೆಯು ಕಲ್ಲನ ಪುಸ್ತಕವನ್ನು ಓದುತ್ತಾಳೆ. ೨. ಅವಿಾರನು ತನ್ನ ಮಗನ ಮದುವೆಯನ್ನು ವೈಭವದಿಂದ ಮಾಡಿದನು. ೩. ಬಕಪಕ್ಷಿಯು ತನ್ನ ಚುಂಚನ್ನು ಹೂಜೆಯೊಳಗೆ ಹಾಕಿ ಸೀಕರಣೆಯನ್ನು ಕುಡಿಯಿತು. ೪. ಬಾಲಕರೇ, ಈಗ ನಾನು ನಿಮಗೆ ಇತಿಹಾಸವನ್ನು ಕಲಿಸಲು ಆರಂಭಿಸುತ್ತೇನೆ. ೫. ದೂತನು ಅರಸನ ಒಪ್ಪಿಗೆಯಿಂದ ಬಿಚ್ಚುಗತ್ತಿಯನ್ನು ಹಿಡಿದು ಕೂಸನ್ನು ಕಡಿಯಲಿಕ್ಕೆ ಬಂದನು.

---

## ೩. ವಾಕ್ಯ (ಮುಂದೆ ಸಾಗಿದ್ದು)

| | | |
|---|---|---|
| ೧. | ಸಾವಿತ್ರಿ ಸಾಲೆಗೆ | ಬದಿಗೆ ಬರೆದ ಪದಗಳ ಸಾಲುಗಳು |
| ೨. | ನಾಯಿಯನ್ನು ಹೊಡೆದನು | ವಾಕ್ಯವೆನಿಸುವವೊ? |
| ೩. | ಸಿದ್ದನು ಪುಸ್ತಕವನ್ನು | ೧. ಸಾವಿತ್ರಿ ಸಾಲೆಗೆ ಇಷ್ಟೇ |

**ಹೇಳಿದರೆ ಕೆಲಮಟ್ಟಿಗೆ** ಅರ್ಥವಾಗುತ್ತಿದ್ದರೂ **ಅರ್ಥವು** ಪೂರ್ಣವಾಗುವದಿಲ್ಲ; ಏನು ಹೇಳುವವಳೆ ಎಂಬುದು ತಿಳಿಯುವದಿಲ್ಲ. ಹೋದಳು, ಬಂದಳು ಮೊದಲಾದ ಯಾವದೊಂದು ಪದವನ್ನು ಸೇರಿಸಿದರೆ ಅರ್ಥವು ಪೂರ್ಣವಾಗುವದು—'**ಸಾವಿತ್ರಿ ಸಾಲೆಗೆ ಹೋದಳು**;' ಈಗ ಅರ್ಥವು ಪೂರ್ಣವಾಗುವದು; ಎಂದರೆ ಹೇಳಿದ್ದು ತಿಳಿಯುವದು. ೨. ನಾಯಿಯನ್ನು ಹೊಡೆದನು. ಈ ಎರಡೇ ಪದಗಳನ್ನು ಹೇಳಿದರೆ ಕೆಲಮಟ್ಟಿಗೆ ಅರ್ಥವಾದರೂ ಅದು ಪೂರ್ಣವಾಗುವದಿಲ್ಲ. ಯಾರು ಹೊಡೆದರು ಎಂಬದು ತಿಳಿಯುವಂತೆ ಮಲ್ಲನು ಇಲ್ಲವೆ ಗೋವಿಂದನು ಎಂಬ ಪದವನ್ನಿಡಬೇಕು, ಎಂದರೆ ಅರ್ಥವು ಪೂರ್ಣವಾಗುವದು. ೩. ಅರ್ಥವು ಪೂರ್ಣವಾಗುವಂತೆ ಇದರೊಡನೆ ಇನ್ನೊಂದು ಪದವನ್ನು ಇಟ್ಟು ಹೇಳು.

**೧. ಭೀಮನು ಕೆಲಸವನ್ನು ಮಾಡಿ,** ಬರಿಗೆ ಬರೆದ
**೨. ಸೀತೆ ಕುಣಿಯುತ್ತ,** ಮಾತುಗಳು ಇನ್ನೂ
**೩. ಮಲ್ಲನು ನಾಟಕವನ್ನು ನೋಡುವದಕ್ಕೆ,** ಮುಗಿದಿಲ್ಲ. ಅರ್ಥವು ಆಗುತ್ತಿದ್ದರೂ ಇನ್ನೂ ಹೇಳುವದು ಉಳಿದಿದೆ ಎಂದು ತೋರುವದು.

೧. ಭೀಮನು ಕೆಲಸವನ್ನು ಮಾಡಿ ಈ ಪದಗಳ ಮುಂದೆ ಬಂದನು, ಇಲ್ಲವೆ ಹೋದನು ಎಂಬ ಪದವನ್ನು ಹೇಳಿದರೆ ಮಾತು ಮುಗಿಯುವದು. ೨. ಸೀತೆ ಕುಣಿಯುತ್ತ ಈ ಪದಗಳ ಮುಂದೆ ಹಾಡುವಳು, ಇಲ್ಲವೆ ಹೋಗುವಳು ಎಂಬ ಪದವನ್ನು ಹೇಳಿದರೆ ಮಾತು ಮುಗಿಯುವದು. ೩. ಮಲ್ಲನು ನಾಟಕವನ್ನು ನೋಡುವದಕ್ಕೆ ಈ ಪದಗಳ ಮುಂದೆ ಮಾತನ್ನು ಮುಗಿಸುವಂಥ ಒಂದು ಪದವನ್ನು ಹೇಳು.

೧. ಭೀಮನು ಕೆಲಸವನ್ನು ಮಾಡಿ ಬಂದನು. ೨. ಸೀತೆ ಕುಣಿಯುತ ಹಾಡುವಳು. ೩. ಮಲ್ಲನು ನಾಟಕವನ್ನು ನೋಡುವದಕ್ಕೆ ಹೋಗುತ್ತಾನೆ. ಈಗ ಈ ಪದಗಳ ಗುಂಪುಗಳು ವಾಕ್ಯಗಳಾಗುವವು.

**ವಾಕ್ಯವೆನಿಸಬೇಕಾದರೆ ಅರ್ಥವು ಪೂರ್ಣವಾಗಿರಬೇಕು,**
**ಎಂದರೆ ಮಾತು ಮುಗಿದಿರಬೇಕು.**

# ಅಭ್ಯಾಸಪ್ರಶ್ನೆಗಳು

೧. ಕೆಳಗೆ ಕೊಟ್ಟ ಪದಗಳ ಗುಂಪುಗಳಲ್ಲಿ ಯಾವವು ವಾಕ್ಯಗಳು ? ಯಾವವು ವಾಕ್ಯಗಳಲ್ಲ ?

ರಾಮನು ಪುಸ್ತಕವನ್ನು. ಮಲ್ಲನು ಓದುವಾಗ. ಸೀತೆ ಹಾಡನ್ನು ಕಲಿತಳು. ಪಾಟಿಯನ್ನು ಒಡೆದನು. ನಾನು ಕಥೆಯನ್ನು ಹೇಳುತ್ತೇನೆ. ಕಾಗೆ ಗುಬ್ಬಿಗಳು. ರಾಮನು ರಾಕ್ಷಸರನ್ನು ಕೊಂದನು. ಹಕ್ಕಿಗಳು ಮರದಿಂದ ಮರಕ್ಕೆ. ಕೂಸು ಮಲಗಿತು.

೨. ಚಿಕ್ಕೆಗಳಿಂದ ತೋರಿಸಿದಲ್ಲಿ ಒಂದೊಂದು ಪದವನ್ನು ಹಾಕಿ ವಾಕ್ಯಗಳನ್ನು ಮಾಡಿರಿ :—

೧. .... ಓಡುತ್ತಾನೆ. ೨. .... ಬಾವಿಯ ನೀರನ್ನು ಕುಡಿಯುತ್ತಾರೆ. ೩. ಮಲ್ಲನು ಹೊಲವನ್ನು .... ೪. ನೀಲಕ್ಕನು ದೇವರಿಗೆ ... ಮಾಡುವಳು. ೫. ನೆಯ್ಕಾರರು ದೋತರವನ್ನು .... ೬. ಹುಡುಗರು .... ಆಡುತ್ತಾರೆ. ೭. ತಂದೆಯು ಮಗನನ್ನು ಸಾಲೆಗೆ.... ೮. ಬೆಕ್ಕು .... ಹಿಡಿಯುವದು.

೩. ಕೆಳಗಿನ ಪದಗಳಲ್ಲಿ ಬೇಕಾದವನ್ನು ಆರಿಸಿಕೊಂಡು ವಾಕ್ಯಗಳನ್ನು ಮಾಡಿರಿ :—

| | | | |
|---|---|---|---|
| ಪಾರಿವಾಳಗಳು | ರಾಮನು | ಕಾಳುಗಳನ್ನು | ಸಿದ್ದನು |
| ಪುಸ್ತಕವನ್ನು | ಓಡುತ್ತಾರೆ | ಪ್ರೀತಿಸುತ್ತಾರೆ | ನದಿಯು |
| ಮಲಗಿದನು | ಹರಿಯುತ್ತದೆ | ಹಣ್ಣುಗಳನ್ನು | ಆರಿಸುತ್ತವೆ |
| ಭೀಮನು | ಕಮಲೆಯು | ನಾಯಿಯು | ಬಕಾಸುರನನ್ನು |
| ಕೊಂದನು | ಹಾಡುಗಳನ್ನು | ಓಡುತ್ತದೆ | ಕಲಿತಳು |

೪. ವಾಕ್ಯವೆಂದರೇನು ? ವಾಕ್ಯವಾಗಬೇಕಾದರೆ ಯಾವ ಸಂಗತಿಗಳು ಬೇಕು ?

---

# ೪. ಕ್ರಿಯಾಪದ

**೧. ಸಂಗನು ನಗುತ್ತಾನೆ.** **೨. ಗಂಗೆ ಎದ್ದಳು.**
**೩. ನಾಯಿಗಳು ಓಡುವವು**

೧ನೆಯ ವಾಕ್ಯದಲ್ಲಿ—ನಗುತ್ತಾನೆ ಎಂದರೆ ನಗುವ ಕೆಲಸವನ್ನು ಮಾಡುತ್ತಾನೆ ಎಂದು ತಿಳಿಯುವದು. ೨ನೆಯ ವಾಕ್ಯದಲ್ಲಿ—ಎದ್ದಳು ಎಂದರೆ ಏಳುವ ಕೆಲಸವನ್ನು ಮಾಡಿದಳು ಎಂದು ತಿಳಿಯುವದು. ೩ನೆಯ ವಾಕ್ಯದಲ್ಲಿ ಓಡುವವು ಎಂದರೆ ಓಡುವ ಕೆಲಸವನ್ನು ಮಾಡುವವು ಎಂದು ತಿಳಿಯುವದು.

**ನಗುತ್ತಾನೆ** — ಇದು ನಗುವ ಕೆಲಸವನ್ನು ಹೇಳುವ ಪದವು.
**ಎದ್ದಳು** — ಇದು ಏಳುವ **ಕೆಲಸ**ವನ್ನು ಹೇಳುವ ಪದವು.
**ಓಡುವವು** — ಇದು ಓಡುವ **ಕೆಲಸ**ವನ್ನು ಹೇಳುವ ಪದವು.

ಕೆಲಸಕ್ಕೆ ಕ್ರಿಯೆ ಎಂದೂ ಹೆಸರುಂಟು. ನಗುತ್ತಾನೆ ಮೊದಲಾದವು ಕೆಲಸವನ್ನು ಎಂದರೆ ಕ್ರಿಯೆಯನ್ನು ಹೇಳುವ ಪದಗಳು. ಆದದರಿಂದ ಇವಕ್ಕೆ **ಕ್ರಿಯಾಪದ** ಎಂಬ ಹೆಸರು.

---

## ಕ್ರಿಯಾಪದ (ಮುಂದೆ ಸಾಗಿದ್ದು)

**ಸಂಗನು ನಗುತ್ತ,**
**ಗಂಗೆ ಎದ್ದು,**
**ನಾಯಿಗಳು ಓಡಲು,**

ಇಲ್ಲಿ ನಗುತ್ತ, ಎದ್ದು, ಓಡಲು ಇವು ಕ್ರಿಯೆಯನ್ನು ಹೇಳುವವು. ಆದರೆ ಮಾತನ್ನು ಮುಗಿಸುವದಿಲ್ಲ. ಇವುಗಳ ಬದಲು ನಗುತ್ತಾನೆ, ಎದ್ದಳು, ಓಡುವವು ಇವನ್ನು ಇಟ್ಟರೆ ಮಾತು ಮುಗಿಯುವವು. **ಕ್ರಿಯಾಪದಗಳು ಮಾತನ್ನು ಮುಗಿಸುವವು.** ನಗುತ್ತ, ಎದ್ದು, ಓಡಲು ಮುಂತಾದವು ಕ್ರಿಯೆಯನ್ನು ಹೇಳಿದರೂ ಮಾತನ್ನು ಮುಗಿಸುವದಿಲ್ಲ. ಆದದರಿಂದ ಅವು ಕ್ರಿಯಾಪದಗಳಲ್ಲ. ನಗುತ್ತಾನೆ, ಎದ್ದಳು, ಓಡುವವು ಮುಂತಾದವು ಕ್ರಿಯೆಯನ್ನು ಹೇಳಿ ಮಾತನ್ನು ಮುಗಿಸುವ ಪದಗಳು; ಆದದರಿಂದ ಕ್ರಿಯಾಪದಗಳು.

## ಅಭ್ಯಾಸವೂ ಪ್ರಶ್ನಗಳೂ

೧. ಕೆಳಗಿನ ವಾಕ್ಯಗಳಲ್ಲಿ ಕ್ರಿಯಾಪದವನ್ನು ಹೇಳಿರಿ :—

ಒಂದು ದಿನ ದೊಡ್ಡ ಮಳೆ ಆಯಿತು. ಕೆರೆಬಾವಿಗಳು ತುಂಬಿ ಹೋದವು. ಬತ್ತದ ಗದ್ದೆಗಳಲ್ಲಿ ನೀರು ನಿಂತಿತು. ಒಬ್ಬ ಒಕ್ಕಲಿಗನು ಇನ್ನು ತನ್ನ ಗದ್ದೆಯ ಒಡ್ಡುಗಳು ಒಡೆಯುವವು ಎಂದು ಅಂಜಿ ಓಡುತ್ತ ಗದ್ದೆಗೆ ಬಂದನು. ನೋಡುತ್ತಾನೆ—ಒಡ್ಡುಗಳು ಒಡೆಯದೆ ಗಟ್ಟಿಯಾಗಿ ಇರುವವು. ನೀರು ತುಂಬಿರುವದು. ಆಗ ಆತನು ಇನ್ನು ತನಗೆ ಬತ್ತದ ಪೈರು ಕೈಗೆ ಬಂದಿತು ಎಂದು ತಿಳಿದನು. ಆ ವರ್ಷ ಬತ್ತದ ಪೈರು ಚೆನ್ನಾಗಿ ಬಂದಿತು; ಒಕ್ಕಲಿಗನು ಬತ್ತವನ್ನು ಪೇಟೆಗೆ ಒಯ್ದು ಮಾರಿದನು. ಬಹಳ ಹಣವು ದೊರೆಯಿತು.

೨. ನಿಮ್ಮ ವಾಚನ ಪುಸ್ತಕದ ಆನೆಯ ಪಾಠದಲ್ಲಿ ಬಂದ ಕ್ರಿಯಾಪದಗಳನ್ನು ಹೇಳಿರಿ.

೩. ಒಂದೊಂದು ಕ್ರಿಯಾಪದವನ್ನು ಹಾಕಿ ವಾಕ್ಯಗಳನ್ನು ಮಾಡಿರಿ.

೧. ಆಕಳು ಹುಲ್ಲನ್ನು........ ೨. ದೀಪವು ಎಣ್ಣೆಯಿಂದ ........... ೩. ನೆಯ್ಕಾರರು ಸೀರೆಗಳನ್ನೂ ದೋತರಗಳನ್ನೂ........ ೪. ನಾಯಿಯು ಒಡೆಯನ ಮನೆಯನ್ನು........ ೫. ಹುಡುಗರು ಹೊಳೆಯಲ್ಲಿ..........

೪. ಒಂದೊಂದು ಕ್ರಿಯಾಪದವನ್ನು ಇಟ್ಟು ಒಂದೊಂದು ವಾಕ್ಯವನ್ನು ಮಾಡಿ ಹೇಳಿರಿ.

೫. ಮೇಲಿನ ಮಾತುಗಳು ಮುಗಿಯುವುದಕ್ಕೆ ಯಾವ ಪದವು ಬೇಕಾಯಿತು ?

೬. ಕ್ರಿಯಾಪದವೆಂದರೇನು ?

## ೫. ಕರ್ತೃ

**ಕೂಸು ಆಡುತ್ತದೆ.** ಈ ವಾಕ್ಯದಲ್ಲಿ—ಆಡುವ ಕ್ರಿಯೆ ನಡೆದಿದೆ. ಈ ಕ್ರಿಯೆಯನ್ನು ಮಾಡುವದು ಕೂಸು.

**ನಾಯಿಯು ತೀವ್ರ ಓಡುವದು.** ಈ ವಾಕ್ಯದಲ್ಲಿ ಯಾವ ಕ್ರಿಯೆ ನಡೆದಿದೆ ? ಓಡುವ ಕ್ರಿಯೆಯನ್ನು ಮಾಡುವದು ನಾಯಿ.

**ಕ್ರಿಯೆಯನ್ನು ಮಾಡುವವರಿಗೆ ಕರ್ತೃ** ಎಂಬ ಹೆಸರು.

**ತಿರಿಕೆರು ಜನರನ್ನು ಕಾಡುತ್ತಾರೆ.** ಇಲ್ಲಿ ಯಾವ ಕ್ರಿಯೆ ನಡೆದಿದೆ ? ಆ ಕ್ರಿಯೆಯನ್ನು ಮಾಡುವವರು ಯಾರು ?

ಅಭ್ಯಾಸ

೧. ಕೆಳಗಿನ ವಾಕ್ಯಗಳಲ್ಲಿ ಕರ್ತೃವನ್ನು ಹೇಳಿರಿ :—

ಅರಸನು ಪ್ರಜೆಗಳನ್ನು ಸಲಹುವನು. ರಾಮನು ರಾವಣನನ್ನು ಕೊಂದನು. ಒಂದು ಪಟ್ಟಣದಲ್ಲಿ ಒಬ್ಬ ಅಮೀರನು ಇದ್ದನು. ಅವನು ಮಗನ ಮದುವೆಯನ್ನು ವೈಭವದಿಂದ ಮಾಡಿದನು. ಒಬ್ಬನು ಸುಳ್ಳು ಸಾಕ್ಷಿಯನ್ನು ಹೇಳಿದನು. ನ್ಯಾಯಾಧೀಶನು ಆತನನ್ನು ಶಿಕ್ಷಿಸಿದನು.

೨. ಕೆಳಗಿನ ಕ್ರಿಯಾಪದಗಳಿಗೆ ತಕ್ಕ ಕರ್ತೃಗಳನ್ನು ಸೇರಿಸಿ ಹೇಳಿರಿ:-

ನಾಚುತ್ತಾಳೆ, ಇರುವದು, ಎಚ್ಚತ್ತಳು, ಬದುಕುವರು, ಅಂಜಿದನು, ಬಂದರು, ಬಾಳುತ್ತಾನೆ, ಇರುವರು, ಓಡಿದನು.

---

## ೬. ಕರ್ಮ

**ಮಲ್ಲನು ಓಡಿದನು.** ಈ ವಾಕ್ಯದಲ್ಲಿ ಮಲ್ಲನು ಮತ್ತು ಓಡಿದನು ಈ ಎರಡು ಪದಗಳಿಂದಲೇ ಒಂದು ವಿಚಾರವು ಪೂರ್ಣವಾಗುವದು.

**ಯಮುನೆ ಕುಣಿಯುತ್ತಾಳೆ.** ಈ ವಾಕ್ಯದಲ್ಲಿಯೂ ಯಮುನೆ ಮತ್ತು ಕುಣಿಯುತ್ತಾಳೆ ಈ ಎರಡು ಪದಗಳಿಂದಲೇ ಒಂದು ವಿಚಾರವು ಪೂರ್ಣವಾಗುವದು. ಆದರೆ—

**೧. ಮಲ್ಲನು ಕಡಿದನು. ೨. ನೀಲಕ್ಕನು ಓದುತ್ತಾಳೆ.**

ಈ ವಾಕ್ಯಗಳನ್ನು ನೋಡಿರಿ. ಇಲ್ಲಿ ವಿಚಾರವು ಪೂರ್ಣವಾಗಿಲ್ಲ. ಮಲ್ಲನು ಕಡಿದನು ಎಂದರೆ ಏನನ್ನು ಕಡಿದನು ಎಂಬದನ್ನು ತಿಳಿದುಕೊಳ್ಳ ಬೇಕೆಂದೆನಿಸುವದು. ಮರವನ್ನು ಇಲ್ಲವೆ ಕಟ್ಟಿಗೆಯನ್ನು ಎಂದು ಹೇಳಿದಾಗ ನಮ್ಮ ಸಮಾಧಾನವಾಗುವದು. ಕಡಿಯುವ ಕ್ರಿಯೆ ನಡೆಯುವದಕ್ಕೆ ಮರ, ಕಟ್ಟಿಗೆ ಮುಂತಾದ ಯಾವದೊಂದು ಬೇಕೇಬೇಕು.

ಇದೇ ಮೇರೆಗೆ ನೀಲಕ್ಕನು ಓದುತ್ತಾಳೆ ಎಂದರೆ ಏನನ್ನು ಓದುತ್ತಾಳೆ ಎಂಬುದನ್ನು ತಿಳಿದುಕೊಳ್ಳಬೇಕೆಂದೆನಿಸುವದು. ಪುಸ್ತಕವನ್ನು ಇಲ್ಲವೆ ಪತ್ರ ವನ್ನು ಎಂದು ಹೇಳಿದಾಗ ನಮ್ಮ ಸಮಾಧಾನವಾಗುವದು. ಓದುವ ಕ್ರಿಯೆ ನಡೆಯುವದಕ್ಕೆ ಪುಸ್ತಕ, ಪತ್ರ ಮುಂತಾದ ಯಾವದೊಂದು ಬೇಕೇ ಬೇಕು.

ಕ್ರಿಯೆಯನ್ನು ಯಾರು ಮಾಡಿದರು ಎಂಬದು, ಎಂದರೆ ಕರ್ತೃವು ಎಲ್ಲ ವಾಕ್ಯಗಳಲ್ಲಿ ಇದ್ದೇ ಇರುವದು. ಕೆಲವು ವಾಕ್ಯಗಳಲ್ಲಿ ಏನನ್ನು (ಮಾಡಿದರು) ಎಂಬುದನ್ನು ಹೇಳಬೇಕಾಗುವದು, ಅದಕ್ಕೆ **ಕರ್ಮ** ಎಂಬ ಹೆಸರು. ಮಲ್ಲನು ಕಟ್ಟಿಗೆಯನ್ನು ಕಡಿದನು. ಇಲ್ಲಿ 'ಕಟ್ಟಿಗೆಯನ್ನು' **ಕರ್ಮವು.** ನೀಲಕ್ಕನು ಪುಸ್ತಕವನ್ನು ಓದುತ್ತಾಳೆ. ಇಲ್ಲಿ 'ಪುಸ್ತಕವನ್ನು' ಕರ್ಮವು.

[ಕ್ರಿಯಾಪದವನ್ನು ಹಿಡಿದು ಯಾರು ಏನು ಎಂದು ಪ್ರಶ್ನೆಮಾಡಿದರೆ ಬರುವ ಉತ್ತರವು ಕರ್ತೃವಾಗಿರುವದು. ಯಾರನ್ನು, ಏನನ್ನು ಎಂದು ಪ್ರಶ್ನೆಮಾಡಿದರೆ ಬರುವ ಉತ್ತರವು ಕರ್ಮವಾಗಿರುವದು.]

ಅಭ್ಯಾಸವೂ ಪ್ರಶ್ನಗಳೂ

**(ಅ) ಕೆಳಗಿನ ವಾಕ್ಯಗಳಲ್ಲಿ ಕರ್ಮವನ್ನು ಹೇಳಿರಿ.**

ಕಲ್ಲನು ಕವಿತೆಯನ್ನು ಕಲಿತನು. ಗೌರವ್ವನು ಪತ್ರವನ್ನು ಬರೆದಳು. ನಾಯಿ ನೀರನ್ನು ಕುಡಿಯಿತು. ರಾಮನು ಶಿವನ ಬಿಲ್ಲನ್ನು ಮುರಿದನು. ತಾಯಿ ಕೂಸನ್ನು ಮಲಗಿಸಿದಳು. ಕೋಳಿಗಳು ಹುಳಗಳನ್ನು ತಿನ್ನುವವು.

(ಆ) ಕೆಳಗಿನ ವಾಕ್ಯಗಳಲ್ಲಿ ತಕ್ಕ ಕರ್ಮಗಳನ್ನು ಸೇರಿಸಿರಿ—
೧. ಸೂರ್ಯನು ನಮಗೆ . . ಕೊಡುವನು. ೨ ಶಿವಾಜಿಯು . . ಸೋಲಿಸಿದನು. ೩. ಅರಸನು . . ಸಲಹುತ್ತಾನೆ. ೪. ದುಡಿಯುವವರು . . ಹೊಂದುತ್ತಾರೆ. ೫. ಜನರು . . ನಂಬುವದಿಲ್ಲ. ೬.... ಮಾಡಬಾರದು; ೭....ಮಾಡಬೇಕು.

---

## ೭. ನಾಮ.

**ಕುದುರೆಯು ಕಡಲೆಯನ್ನು ತಿನ್ನುವದು.**

ಈ ವಾಕ್ಯದಲ್ಲಿ 'ತಿನ್ನುವದು' ಕ್ರಿಯಾಪದವೆಂಬದನ್ನು ಬಲ್ಲಿರಿ. ಮೊದಲನೆಯ ಪದವು ಕುದುರೆಯು. ಅದು ಇಲ್ಲಿ ಕರ್ತೃವಾಗಿದೆ. ಕುದುರೆ ಎಂಬದು ಒಂದು ಪ್ರಾಣಿಯ **ಹೆಸರು.** 'ಕಡಲೆಯನ್ನು' ಎರಡನೆಯ ಪದವು. ಅದು ಕರ್ಮವು. ಕಡಲೆ ಎಂಬದು ಒಂದು ತರದ ಕಾಳಿನ ಹೆಸರು.

**ಭೀಮನು ಕಡುಬನ್ನು ಹೆಚ್ಚಿಗೆ ಪ್ರೀತಿಸುತ್ತಾನೆ.**

ಈ ವಾಕ್ಯದಲ್ಲಿ ಪ್ರೀತಿಸುತ್ತಾನೆ ಇದು ಕ್ರಿಯಾಪದವೆಂಬುದನ್ನು ಬಲ್ಲಿರಿ. ಮೊದಲನೆಯ ಪದವು ಭೀಮನು. ಭೀಮನು ಕರ್ತೃವು. ಭೀಮ ಎಂಬ ಶಬ್ದವು ಒಬ್ಬ ಮನುಷ್ಯನ **ಹೆಸರು.** 'ಕಡುಬನ್ನು' ಎರಡನೆಯ ಪದವು. ಅದು ಕರ್ಮವು. ಕಡುಬು ಶಬ್ದವು ತಿನ್ನುವ ಒಂದು ಪದಾರ್ಥದ **ಹೆಸರು.** 'ಹೆಚ್ಚಿಗೆ' ಇದು ಹೆಸರು ಅಲ್ಲ.

**ತಾಮ್ರದಿಂದ ಕೊಡಗಳನ್ನು ಮಾಡುವರು.**

'ಮಾಡುವರು' ಕ್ರಿಯಾಪದವು. 'ತಾಮ್ರದಿಂದ' ಇದರಲ್ಲಿ ತಾಮ್ರ ಶಬ್ದವು ಒಂದು ತರದ ಧಾತುವಿನ **ಹೆಸರು.** ಕೊಡಗಳನ್ನು ಈ ಪದದಲ್ಲಿ ಕೊಡ ಶಬ್ದವು ನೀರನ್ನು ತರುವ ಒಂದು ತರದ ಪಾತ್ರೆಯ ಹೆಸರು.

ಮೇಲಿನ ವಾಕ್ಯಗಳಲ್ಲಿ ಬಂದ **ಕುದುರೆ, ಕಡಲೆ, ಭೀಮ, ಕಡುಬು, ತಾಮ್ರ, ಕೊಡ** ಇವು ಹೆಸರುಗಳು.

ಮಲ್ಲ, ಕಲ್ಲ, ತಿಮ್ಮ, ಗಂಗೆ, ಸೀತೆ ಮೊದಲಾದವು ಮನುಷ್ಯರ ಹೆಸರುಗಳು; ಎತ್ತು, ಎಮ್ಮೆ, ಆಕಳು, ಹುಲಿ, ಇಲಿ, ಕಾಗೆ ಮೊದಲಾದವು ಪ್ರಾಣಿಗಳ ಹೆಸರುಗಳು; ಹುಣಿಸೆ, ಜಾಲಿ, ಆಲ, ಮಾವು, ಬೇವು ಮೊದಲಾದವು ಗಿಡಗಳ ಹೆಸರುಗಳು. ಕರ್ನಾಟಕ, ಮಹಾರಾಷ್ಟ್ರ, ಮಲೆಯಾಳ, ಬಂಗಾಲ ಮೊದಲಾದವು ದೇಶಗಳ ಹೆಸರುಗಳು.

ವಾಕ್ಯಗಳಲ್ಲಿ ಇಂಥ ಹೆಸರುಗಳು ಬಹಳ ಇರುವವು. ಇವು **ನಾಮ** ಎಂದೆನಿಸುವವು. ನಾ**ಮ** ಎಂದರೆ ಹೆಸರು.

## ನಾಮಪದ.

ನಾಯಿ ಎಂಬದು ನಾಮವು; ಇದರಿಂದ ನಾಯಿಯು ನಾಯಿಯನ್ನು ನಾಯಿಗೆ, ನಾಯಿಯಲ್ಲಿ, ನಾಯಿಗಳಿಂದ ಮುಂತಾದವು ಆಗಿವೆ.

ಭೀಮ ಎಂಬದು ನಾಮವು. ಇದರಿಂದ ಭೀಮನು, ಭೀಮನಿಂದ, ಭೀಮನ, ಭೀಮನಲ್ಲಿ ಮುಂತಾದವು ಆಗಿವೆ.

ಪುಸ್ತಕ ಎಂಬದು ನಾಮವು. ಇದರಿಂದ ಪುಸ್ತಕವನ್ನು, ಪುಸ್ತಕಕ್ಕೆ, ಪುಸ್ತಕಗಳಲ್ಲಿ ಮುಂತಾದವು ಆಗಿವೆ.

ಕೊಡ ಎಂಬದು ನಾಮವು. ಇದರಿಂದ ಕೊಡವು, ಕೊಡಗಳು, ಕೊಡವನ್ನು, ಕೊಡದಿಂದ, ಕೊಡದ ಮುಂತಾದವು ಆಗಿವೆ.

ನಾಯಿ, ಭೀಮ, ಪುಸ್ತಕ, ಕೊಡ ಇವು ನಾಮಗಳು; ನಾಯಿಯು, ಭೀಮನನ್ನು, ಪುಸ್ತಕಗಳಿಂದ, ಕೊಡಗಳು ಮುಂತಾದವು **ನಾಮಪದಗಳು**.

**ನಾಮಗಳ ಮುಂದೆ ಕೆಲವು ಅಕ್ಷರಗಳು ಸೇರುವದರಿಂದ ನಾಮಪದಗಳಾಗುವವು.**

### ಅಭ್ಯಾಸವೂ ಪ್ರಶ್ನಗಳೂ

(೧) ಅ. ಒಬ್ಬೊಬ್ಬರು ಒಂದೊಂದು ಊರ ಹೆಸರನ್ನು (ನಾಮವನ್ನು) ಹೇಳಿರಿ.

೨. ಒಬ್ಬೊಬ್ಬರು ಒಂದೊಂದು ನದಿಯ, ಗುಡ್ಡದ ಹೆಸರನ್ನು ಹೇಳಿರಿ.
೩. ಒಬ್ಬೊಬ್ಬರು ಒಂದೊಂದು ಗಿಡದ, ಬಳ್ಳಿಯ ಹೆಸರನ್ನು ಹೇಳಿರಿ.
(ಪ್ರಾಣಿ, ಮನುಷ್ಯ, ಪಶು, ಪಕ್ಷಿ, ಹಣ್ಣು, ಬಟ್ಟೆ, ಬಳಗದ ಜನರು, ಮನೆಯೊಳಗಿನ ಸಾಮಾನು ಮುಂತಾದವುಗಳ ಹೆಸರುಗಳನ್ನು ಕೇಳಿಕೊಳ್ಳಬಹುದು.)

(ಬ) ನಾಮವೆಂದರೇನು? ನಾಮ ನಾಮಪದಗಳಲ್ಲಿ ಹೆಚ್ಚುಕಡಿಮೆ ಏನು?

(ಕ) ನಿಮ್ಮ ವಾಚನಪುಸ್ತಕದೊಳಗಿನ ಪಾಠಗಳಲ್ಲಿ ನಾಮಪದಗಳನ್ನು ಹುಡುಕಿರಿ; ಅವುಗಳ ನಾಮಗಳನ್ನು ಹೇಳಿರಿ.

(ಡ) ಕೆಳಗಿನ ವಾಕ್ಯಗಳಲ್ಲಿ ನಾಮಪದಗಳನ್ನು ಹೇಳಿರಿ; ಮತ್ತು ಅವುಗಳ ನಾಮಗಳನ್ನು ಹೇಳಿರಿ.

ಅಡವಿಯಲ್ಲಿ ಅರಳೆಮರದ ಮೇಲೆ ಒಂದು ಗಿಳಿಯು ಕುಳಿತಿತ್ತು. ಒಂದು ಗಿಡಗವು ಆ ಮರಕ್ಕೆ ಬಂದಿತು. ಅದು ಗಿಳಿಗೆ ಗೆಳೆಯಾ,ನಿನ್ನ ಚುಂಚು ಬಹು ಬಲವಾಗಿದೆ. ಬರಿಯ ಕಾಯಿ, ಹಣ್ಣು ಇವುಗಳನ್ನಷ್ಟೇ ಏಕೆ ತಿನ್ನುವೆ? ನನ್ನಂತೆ ಹಕ್ಕಿಗಳ ಮಾಂಸವನ್ನು ತಿನ್ನಬಾರದೇ? ಎಂದು ಉಪದೇಶ ಮಾಡಿತು.

ಒಕ್ಕಲಿಗರು ನೇಗಿಲಿಗೆ ಎತ್ತುಗಳನ್ನು ಹೂಡಿ ಹೊಲವನ್ನು ಹರಗುತ್ತಾರೆ. ಬತ್ತ ಜೋಳ ಮೊದಲಾದ ಕಾಳುಗಳನ್ನು ಬೆಳೆಯಿಸುತ್ತಾರೆ.

---

## ೮. ವಿಶೇಷಣ

**೧. ಕರಿಯ ನಾಯಿಯು ಓಡುವದು.**
**೨. ಜಾಣ ಹುಡುಗರು ಲೆಕ್ಕವನ್ನು ಮಾಡುವರು.**
**೩. ದೊಡ್ಡ ಹೆಂಗಸು ಹಾಡಿದಳು.**
**೪. ಹಿರಿಯ ಮನುಷ್ಯನು ಮಾತಾಡಿದನು.**

೧ನೆಯ ವಾಕ್ಯದಲ್ಲಿ—'ನಾಯಿಯು' ನಾಮಪದವು. **ಕರಿಯ** ಎಂಬದು ನಾಯಿ **ಎಂಥದು** ಎಂಬುದನ್ನು ತಿಳಿಸುವದು. ನಾಯಿಯು ಎಂದು ಇಷ್ಟೇ ಹೇಳಿದರೆ ನಾಯಿಯ ವಿಷಯವಾಗಿ ಹೆಚ್ಚಿಗೆ ಹೇಳಿದಂತಾಗುವದಿಲ್ಲ. ಕರಿಯ ನಾಯಿಯು

ಎಂದು ಹೇಳಿದಾಗ ನಾಯಿ ಎಂಥದು ಎಂದು ಅದರ ವಿಷಯವಾಗಿ ಹೆಚ್ಚಿಗೆ ಹೇಳಿದಂತಾಗುವದು. ಕರಿಯ ಎಂಬದು ನಾಯಿ **ಈ ನಾಮದ ವಿಷಯವಾಗಿ ಹೆಚ್ಚಿನ ಸಂಗತಿಯನ್ನು ತಿಳಿಸುವದು.** ೨ನೆಯ ವಾಕ್ಯದಲ್ಲಿ **ಜಾಣ** ಶಬ್ದವು ಹುಡುಗರು **ಎಂಥವರು** ಎಂಬದನ್ನು ತಿಳಿಸುವದು; ಎಂದರೆ ಜಾಣ ಎಂಬ ಶಬ್ದವು ಹುಡುಗ **ಈ ನಾಮದ ವಿಷಯವಾಗಿ ವಿಶೇಷ ಸಂಗತಿಯನ್ನು ಎಂದರೆ ಹೆಚ್ಚಿನ ಸಂಗತಿಯನ್ನು ತಿಳಿಸುವದು.** ೩ನೆಯ ವಾಕ್ಯದಲ್ಲಿ ದೊಡ್ಡ ಈ ಶಬ್ದವು **ಹೆಂಗಸು ಎಂಥವಳು** ಎಂಬದನ್ನು ತಿಳಿಸುವದು. ದೊಡ್ಡ ಶಬ್ದವು ಹೆಂಗಸು **ಈ ನಾಮದ ವಿಷಯವಾಗಿ ವಿಶೇಷ ಸಂಗತಿಯನ್ನು ತಿಳಿಸುವದು.** ೪ನೆಯ ವಾಕ್ಯದಲ್ಲಿ **ಹಿರಿಯ** ಶಬ್ದವು ಮನುಷ್ಯನು **ಎಂಥವನು** ಎಂಬದನ್ನು ತಿಳಿಸುವದು. ಹಿರಿಯ ಶಬ್ದವು ಮನುಷ್ಯ ಎಂಬ **ನಾಮದ ವಿಷಯವಾಗಿ ವಿಶೇಷ ಸಂಗತಿಯನ್ನು ತಿಳಿಸುವದು.**

ವಾಕ್ಯದಲ್ಲಿ ಕೆಲವು ಶಬ್ದಗಳು ನಾಮಗಳ ವಿಷಯವಾಗಿ ವಿಶೇಷ ಸಂಗತಿಯನ್ನು ತಿಳಿಸುವಂಥವು ಇರುವವು; ಎಂದರೆ ಅವು **ನಾಮಗಳನ್ನು ವರ್ಣಿಸುವವು. ಕರಿಯ, ಜಾಣ, ದೊಡ್ಡ, ಹಿರಿಯ** ಮೊದಲಾದ ಶಬ್ದಗಳು ನಾಮಗಳ ವಿಷಯವಾಗಿ ವಿಶೇಷ ಸಂಗತಿಯನ್ನು ತಿಳಿಸುವವು; ಎಂದರೆ ಎಂಥವನು, ಎಂಥವಳು, ಎಂಥವರು, ಎಂಥದು, ಎಂಥವು ಎಂದು ವರ್ಣಿಸುವವು.

**ಕರಿಯ** ನಾಯಿ      ಜಾಣ ನಾಯಿ

**ದೊಡ್ಡ** ನಾಯಿ      **ಹಿರಿಯ** ನಾಯಿ

ಇಲ್ಲಿ ಕರಿಯ, ಜಾಣ, ದೊಡ್ಡ, ಹಿರಿಯ ಎಂಬ ಶಬ್ದಗಳು ನಾಯಿ ಎಂಥದು ಎಂದು ಬೇರೆ ಬೇರೆ ರೀತಿಯಿಂದ ವರ್ಣಿಸುವವು. ಎಂದರೆ ನಾಯಿ ಈ ನಾಮಪದದ ವಿಷಯವಾಗಿ ಒಂದೊಂದು ವಿಶೇಷ ಸಂಗತಿಯನ್ನು ತಿಳಿಸುವವು. ಕರಿಯ ಮೊದಲಾದ ಶಬ್ದಗಳಿಗೆ **ವಿಶೇಷಣ** ಎಂಬ ಹೆಸರು.

## ೬. ವಿಶೇಷಣ (ಮುಂದೆ ಸಾಗಿದ್ದು) ಮತ್ತು ವಿಶೇಷ್ಯ

**೧. ಒಂದು ನಾಯಿ ಓಡುವದು**

**೨. ಎರಡು ಹಕ್ಕಿಗಳು ಹಾರಾಡುತ್ತವೆ.**

**೩. ಇಬ್ಬರು ಹುಡುಗರು ಮಲಗಿದರು.**

***೪. ಮಲ್ಲನು ನೂರು ರೂಪಾಯಿಗಳನ್ನು ಗಳಿಸಿದನು.***

ಮೊದಲನೆಯ ವಾಕ್ಯದಲ್ಲಿ ಒಂದು ಈ ಶಬ್ದವು ನಾಯಿ **ಎಷ್ಟು** ಎಂಬದನ್ನು ತಿಳಿಸುವದು. ೨ನೆಯ ವಾಕ್ಯದಲ್ಲಿ ಎರಡು ಈ ಶಬ್ದವು ಹಕ್ಕಿಗಳು **ಎಷ್ಟು** ಎಂಬುದನ್ನು ತಿಳಿಸುವದು. ಮುಂದಿನ ವಾಕ್ಯಗಳಲ್ಲಿ ಇಬ್ಬರು, ನೂರು ಈ ಶಬ್ದಗಳು ಎಷ್ಟು ಎಂಬುದನ್ನು ತಿಳಿಸುವವು.

**ಒಂದು, ಎರಡು, ಇಬ್ಬರು, ನೂರು, ಸಾವಿರ** ಮೊದಲಾದ ಶಬ್ದಗಳು ನಾಮಗಳ ವಿಷಯವಾಗಿ ಅವು ಎಷ್ಟು ಎಂಬ **ವಿಶೇಷ ಸಂಗತಿಯನ್ನು ತಿಳಿಸುವವು**. ಇವುಗಳಿಗೂ ವಿಶೇಷಣ ಎಂಬ ಹೆಸರು.

ನಾಮಗಳ ವಿಷಯವಾಗಿ ಅವು ಎಷ್ಟು ಎಂಬದನ್ನು ತಿಳಿಸುವ ಒಂದು ಎರಡು ನೂರು ಮೊದಲಾದ ಶಬ್ದಗಳು **ವಿಶೇಷಣಗಳು**.

೧. ಕರಿಯ, ಜಾಣ, ದೊಡ್ಡ, ಸಣ್ಣ, ಹಿರಿಯ, ಕಿರಿಯ ಮೊದಲಾದ ಶಬ್ದಗಳು ಎಂಥ **ಎಂಬುದನ್ನು ತಿಳಿಸುವ ವಿಶೇಷಣಗಳು.**

೨. ಒಂದು, ಎರಡು, ಇಬ್ಬರು, ಮೂವರು, ನೂರು, ಸಾವಿರ ಮೊದಲಾದ ಶಬ್ದಗಳು **ಎಷ್ಟು ಎಂಬುದನ್ನು** ತಿಳಿಸುವ ವಿಶೇಷಣಗಳು.

### ಅಭ್ಯಾಸ

೧. ಕೆಳಗಿನ ವಾಕ್ಯಗಳಲ್ಲಿ ವಿಶೇಷಣಗಳು ಯಾವವು? ಅವು ನಾಮಗಳ ವಿಷಯವಾಗಿ ಏನು ಹೇಳುವವು.

ದಶರಥನಿಗೆ ನಾಲ್ವರು ಮಕ್ಕಳು ಇದ್ದರು. ಅವರಲ್ಲಿ ಹಿರಿಯನಾದ* ರಾಮನನ್ನು ದಶರಥನು ಬಹಳ ಪ್ರೀತಿಸುತ್ತಿದ್ದನು. ಕೈಕೇಯಿ ದಶರಥನ

---

* ಎಂಥ ಎಂಬುದನ್ನು ತಿಳಿಸುವ ವಿಶೇಷಣಗಳ ಮುಂದೆ ಆದ ಎಂಬದನ್ನಿಡುವ ವಾಡಿಕೆಯುಂಟು.

ಕಿರಿಯ ಹೆಂಡತಿ. ಆಕೆಗೆ ಅಧೀನನಾದ ದಶರಥನು ರಾಮನನ್ನು ಹದಿನಾಲ್ಕು ವರ್ಷ ವನವಾಸಕ್ಕೆ ಕಳುಹಿದನು. ರಾಮನು ಅಡವಿಯಲ್ಲಿರುವಾಗ ನೂರಾರು ಜನ ರಾಕ್ಷಸರನ್ನು ಕೊಂದನು. ದುಷ್ಟನಾದ ರಾವಣನು ಸೀತೆಯನ್ನು ಕದ್ದೊಯ್ದನು. ಶೂರನಾದ ರಾಮನು ಆ ಕಳ್ಳ ರಾವಣನನ್ನು ಕೊಂದು ಹಾಕಿದನು.

(೨) ಒಳ್ಳೆಯ, ಚಿಕ್ಕ, ಕುಂಟ ಚೆಲುವ, ಕುರುಡ, ಶೂರ, ಚತುರ, ಹುಳಿ, ಸಿಹಿ, ಹೆಡ್ಡ, ಅಂಜುಬುರುಕ, ಮುದುಕ ಈ ವಿಶೇಷಣಗಳನ್ನು ಒಂದೊಂದು ನಾಮದ ಹಿಂದೆ ಇಟ್ಟು ತೋರಿಸಿರಿ.

(೩) ನಾಲ್ಕು, ನಾಲ್ವರು, ಐದು, ಐವರು, ಸಾವಿರ ಲಕ್ಷ ಈ ವಿಶೇಷಣಗಳನ್ನು ಒಂದೊಂದು ನಾಮದ ಹಿಂದೆ ಉಪಯೋಗಿಸಿ ತೋರಿಸಿರಿ.

(೪) ಕೆಳಗೆ ಕೊಟ್ಟ ನಾಮಗಳ ಹಿಂದೆ ಎಂಥ ಎಂಬದನ್ನು ತಿಳಿಸುವ ಮೂರು ಮೂರು ವಿಶೇಷಣಗಳನ್ನು ಮತ್ತು ಎಷ್ಟು ಎಂಬದನ್ನು ತಿಳಿಸುವ ಒಂದೊಂದು ವಿಶೇಷಣವನ್ನು ಇಡಿರಿ.

....ಹಕ್ಕಿ, ...ಸಾಲಿ,....ಹಾವುಗಳು,....ಹಣ್ಣು,.... ಗಿಡ,.... ಕಾಗೆ,.... ಕುಂಗಿ,....ಹೂವುಗಳು,....ಹುಡುಗಿಯರು.

## ವಿಶೇಷ್ಯ

೧. ಶೂರನಾದ ಶಿವಾಜಿಯು ರಾಜ್ಯವನ್ನು ಸ್ಥಾಪಿಸಿದನು.

೨. ಮಂಗಗಳು ದೊಡ್ಡ ಮರಗಳನ್ನು ಸಹಜವಾಗಿ ಏರುವವು.

೧ನೆಯ ವಾಕ್ಯದಲ್ಲಿ ಶೂರನಾದ ಈ ವಿಶೇಷಣವು ಶಿವಾಜಿಯನ್ನು ವರ್ಣಿಸುವದು. ೨ನೆಯ ವಾಕ್ಯದಲ್ಲಿ ದೊಡ್ಡ ಈ ವಿಶೇಷಣವು ಮರಗಳನ್ನು ವರ್ಣಿಸುವದು.

**ವಿಶೇಷಣವು ಯಾವುದನ್ನು ವರ್ಣಿಸುವದೋ ಆದಕ್ಕೆ ವಿಶೇಷ್ಯ ಎಂಬ ಹೆಸರು.**

ಮೇಲಿನ ವಾಕ್ಯಗಳಲ್ಲಿ ಶಿವಾಜಿಯು, ಮರಗಳನ್ನು ಇವು ವಿಶೇಷ್ಯಗಳು.

ಅಭ್ಯಾಸ

(೧) ಬಿಳಿಯ ಆಕಳು; ಪುಟ್ಟ ಕೂಸು; ಎರಡು ಕಣ್ಣುಗಳು; ಮುರಕ ಮನೆ; ಕುರುಡ ನೊಣವು; ಇವುಗಳಲ್ಲಿ ವಿಶೇಷ್ಯಗಳು ಯಾವವು?

(೨) ಕೆಳಗೆ ಕೆಲವು ನಾಮಪದಗಳೂ, ವಿಶೇಷಣಗಳೂ ಇವೆ. ಒಂದೊಂದು ನಾಮಪದಕ್ಕೆ ತಕ್ಕ ವಿಶೇಷಣವನ್ನು ಸೇರಿಸಿ ಹೇಳಿರಿ.

ಕಣ್ಣುಗಳು; ಕಾಗೆ, ಕುದುರೆ ರೂಪಾಯಿಗಳು, ಹುಡುಗರು, ಹುಡುಗಿ, ಸೋನಾರಿ, ಜಾಣ, ಎರಡು, ಚಪಲವಾದ, ಸಾವಿರ, ಕರಿಯ.

ವಿಶೇಷಣ ವಿಶೇಷ್ಯಗಳಲ್ಲಿ ಮೊದಲು ಯಾವುದನ್ನು ಇಡುವಿರಿ? ಬಳಿಕ ಯಾವುದನ್ನು ಇಡುವಿರಿ?

**ಬಹುಶಃ ವಿಶೇಷಣಗಳು ವಿಶೇಷ್ಯಗಳ ಹಿಂದೆ ಬರುವವು.**

---

## ೧೦. ಸರ್ವನಾಮ

**ಸಿದ್ಧನು ಸಾಲೆಗೆ ಹೋಗುತ್ತಾನೆ.**
**ಆತನು ಒಳ್ಳೆಯವನು.**
**ಅವನು** (ಒಳ್ಳೆಯವನು)

ಇಲ್ಲಿ ಮೊದಲು ಸಿದ್ಧನು ಎಂಬ ನಾಮಪದವು ಬಂದಿದೆ. ತರುವಾಯ ಸಿದ್ಧನು ಎಂಬ ನಾಮಪದದ ಸ್ಥಳದಲ್ಲಿ ಆತನು ಇಲ್ಲವೆ ಅವನು ಬಂದಿದೆ. ಆತನು ಇಲ್ಲವೆ ಅವನು ಎಂದರೆ ಇಲ್ಲಿ ಸಿದ್ಧನು.

**ರಾಮನು ಸೀತೆಯನ್ನು ಮದುವೆಯಾದನು. ಆತನು ಅಯೋಧ್ಯೆಯಲ್ಲಿ ಇದ್ದನು.** ಈ ವಾಕ್ಯದಲ್ಲಿ ಆತನು ಯಾವ ನಾಮಪದದ ಸ್ಥಳದಲ್ಲಿ ಬಂದಿದೆ? ಇಲ್ಲಿ ಆತನು ಎಂದರೆ ಯಾರು?

**ಸಾವಿತ್ರಿ ಮದುವೆ ಮಾಡಿಕೊಂಡಳು. ಆಕೆ ಅತ್ತೆಯ ಮನೆಗೆ ಹೋಗುವಳು.** (ಅವಳು ಅತ್ತೆಯ ಮನೆಗೆ ಹೋಗುವಳು). ಇಲ್ಲಿ ಮೊದಲು ಸಾವಿತ್ರಿ, ಎಂಬ ನಾಮಪದವು ಬಂದಿದೆ. ಬಳಿಕ ಸಾವಿತ್ರಿ ಎಂಬ ನಾಮಪದದ ಸ್ಥಳದಲ್ಲಿ ಆಕೆ ಇಲ್ಲವೆ ಅವಳು ಎಂಬುದು ಬಂದಿದೆ; ಆಕೆ ಇಲ್ಲವೆ ಅವಳು ಎಂದರೆ ಇಲ್ಲಿ ಸಾವಿತ್ರಿ.

ಕೆಳಗಿನ ವಾಕ್ಯಗಳಲ್ಲಿ ಅವಳು, ಆಕೆ, ಇವು ಯಾವ ನಾಮಪದಗಳ ಸ್ಥಳದಲ್ಲಿ ಬಂದಿವೆ?

ಸೀತೆ ಜನಕರಾಜನ ಮಗಳು. ಅವಳು ರಾಮನ ಹೆಂಡತಿ.

ಬೀರನು ಪರೀಕ್ಷೆಯಲ್ಲಿ ತೇರ್ಗಡೆಹೊಂದಿ ತಾಯಿಗೆ ನಮಸ್ಕಾರ ಮಾಡಿದನು. ಆಗ ಆಕೆ ಬೀರನನ್ನು ಹರಸಿದಳು.

**ಆಕಳು ಸಭ್ಯವಾದ ಪ್ರಾಣಿಯು; ಅದು ಹುಲ್ಲನ್ನು ಮೇಯುವದು.**

ಇಲ್ಲಿ ಮೊದಲು ಆಕಳು ಈ ನಾಮಪದವು ಬಂದಿದೆ.

ಬಳಿಕ ಆಕಳು ಈ ನಾಮಪದದ ಸ್ಥಳದಲ್ಲಿ ಅದು ಎಂಬದು ಬಂದಿದೆ. ಅದು ಎಂದರೆ ಇಲ್ಲಿ ಆಕಳು.

**ದೀಪವು ಬೆಳಕನ್ನು ಕೊಡುವನು. ಅದು ಎಣ್ಣೆಯಿಂದ ಉರಿಯುವದು.** ಇಲ್ಲಿ ಅದು ಎಂದರೆ ಯಾವದು? ಅದು ಎಂಬುದು ಯಾವ ನಾಮಪದದ ಸ್ಥಳದಲ್ಲಿ ಬಂದಿದೆ?

ವಿಶ್ವಾಮಿತ್ರನು ಮೊದಲು ಅರಸನು; ಬಳಿಕ ಈತನು (ಇವನು) ಋಷಿಯಾದನು. ಇಲ್ಲಿ ಈತನು ಎಂದರೆ ಯಾರು? 'ಈತನು' ಯಾವ ನಾಮಪದದ ಸ್ಥಳದಲ್ಲಿ ಬಂದಿದೆ? ಸಾವಿತ್ರಿಯು ಬಹಳ ಒಳ್ಳೆಯವಳು; ಈಕೆ (ಇವಳು) ಈ ಊರ ಗೌಡರ ಮಗಳು. ಇಲ್ಲಿ ಈಕೆ ಎಂದರೆ ಯಾರು? ಈಕೆ (ಇವಳು) ಯಾವ ನಾಮಪದದ ಸ್ಥಳದಲ್ಲಿ ಬಂದಿದೆ?

ಹುಬ್ಬಳ್ಳಿಯು ದೊಡ್ಡ ಪಟ್ಟಣವು; ಇದು ಧಾರವಾಡದ ದಕ್ಷಿಣಕ್ಕಿರುವದು. ಇಲ್ಲಿ ಇದು ಎಂದರೆ ಯಾವದು? 'ಇದು' ಯಾವ ನಾಮಪದದ ಸ್ಥಳದಲ್ಲಿ ಬಂದಿದೆ?

ಅವನು, ಆತನು, ಅವಳು, ಆಕೆ, ಅವರು, ಅದು, ಅವು ಈ ಶಬ್ದಗಳು ನಾಮಪದಗಳ ಸ್ಥಳದಲ್ಲಿ ಬರುವವು. ಇದೇ ಮೇರೆಗೆ ಇವನು ಈತನು, ಇವಳು, ಈಕೆ ಇವರು, ಇದು, ಇವು ಈ ಶಬ್ದಗಳೂ ನಾಮಪದಗಳ ಸ್ಥಳದಲ್ಲಿ ಬರುವವು; ಇವು ಸರ್ವನಾಮಗಳು.

ಅಭ್ಯಾಸ

೧. ಕೆಳಗಿನ ವಾಕ್ಯಗಳಲ್ಲಿ ಒಂದೊಂದು ನಾಮಪದವು ಹಲವು ಸಾರೆ ಬಂದಿರುವದರಿಂದ ವಾಕ್ಯಗಳು ಚೆಂದ ಕಾಣಿಸುವದಿಲ್ಲ. ಅಲ್ಲಿ ಸರ್ವನಾಮ ಗಳನ್ನು ಉಪಯೋಗಿಸಿರಿ.

ಒಂದು ಬಕಪಕ್ಷಿಯು ಆಹಾರಕ್ಕಾಗಿ ಕೆರೆಗೆ ಹೋಗುತ್ತಿತ್ತು. ಬಕ ಪಕ್ಷಿಯು ಅಲ್ಲಿ ಹೊಂಚಿಕೊಂಡು ಕುಳಿತು ತನ್ನ ಅಳವಿನೊಳಗೆ ಬಂದ ಮೀನ ಗಳನ್ನು ಹಿಡಿದು ತಿನ್ನುತ್ತಿತ್ತು. ಬಕಪಕ್ಷಿಯು ಮೀನಗಳನ್ನು ಹಿಡಿದು ತಿನ್ನು ತ್ತಿರುವಾಗ ಅಲ್ಲಿಗೆ ಒಂದು ನರಿಯು ಬಂದಿತು.

ಕೃಷ್ಣನು ಬಹಳ ಶೂರನಾಗಿದ್ದನು. ಕೃಷ್ಣನು ಸಣ್ಣವನಿದ್ದಾಗಲೇ ಹಲವು ಜನ ರಾಕ್ಷಸರನ್ನು ಕೊಂದನು. ಕೃಷ್ಣನನ್ನು ದೇವರೆಂದು ಜನರು ತಿಳಿಯುತ್ತಾರೆ.

ಶಾಂಡಿಲಿಯು ಒಬ್ಬ ಋಷಿಯ ಹೆಂಡತಿ. ಶಾಂಡಿಲಿಯು ಪತಿಸೇವೆಯಲ್ಲಿ ಹಸರಾಗಿದ್ದಳು. ಶಾಂಡಿಲಿಗೆ ಗಂಡನೇ ದೇವರೆಂಬ ತಿಳಿವಳಿಕೆ ಇತ್ತು.

೨. ಅವನು, ಈಕೆ, ಅದು, ಅವಳು, ಇವರು ಈ ಸರ್ವನಾಮಗಳು ಬರುವಂತೆ ವಾಕ್ಯಗಳನ್ನು ರಚಿಸಿರಿ.

---

## ೧೧. ಸರ್ವನಾಮ (೨)

**(೧) ಶಾಂಡಿಲಿ—ಮಗಳೇ, ನಾನು ಯಾವ ದೇವರಿಗೂ ನಡ ಕೊಳ್ಳಲಿಲ್ಲ. (೨) ನಾನು ಪತ್ತಿವ್ರಾವಂದಿರ ಮಾತುಗಳನ್ನು ಎಂದೂ ಮೀರಲಿಲ್ಲ.**

ಇಲ್ಲಿ ಮಾತಾಡಿದವಳು ಶಾಂಡಿಲಿ. ಶಾಂಡಿಲಿ ಈ ನಾಮಪದದ ಸ್ಥಳ ದಲ್ಲಿ ನಾನು ಎಂಬುದು ಬಂದಿದೆ.

**ಆಗ ರಾಮಲಕ್ಷ್ಮಣರು ನಾವು ಅಡವಿಗೆ ಹೋಗುವೆವೆಂದು ಹೇಳಿ ದರು.** ಇಲ್ಲಿ ನಾವು ಎಂದರೆ ಯಾರು? ಮಾತಾಡಿದವರು ರಾಮಲಕ್ಷ್ಮ ಣರು; ರಾಮಲಕ್ಷ್ಮಣರು ಈ ನಾಮಪದದ ಸ್ಥಳದಲ್ಲಿ ನಾವು ಎಂಬದು ಬಂದಿದೆ.

ಮಾತಾಡುವವರು ತಮ್ಮ ಹೆಸರಿನ ಸ್ಥಳದಲ್ಲಿ ನಾನು **ನಾವು ಈ** ಶಬ್ದಗಳನ್ನು ಉಪಯೋಗಿಸುವರು.

ಸೀತೆ—ಅಣ್ಣ, ನೀನು ನೂಕಿದ್ದರಿಂದ ಕನ್ನಡಿಯನ್ನು ತುಳಿದೆನು; ನೀನು ಸುಮ್ಮನೆ ನಿಂತವಳನ್ನು ಹೀಗೆ ನೂಕಬೇಕೇ?

ಇಲ್ಲಿ ನೀನು ಎಂದರೆ ಯಾರು? ಸೀತೆ ಅಣ್ಣನನ್ನು ಕುರಿತು ಮಾತಾಡಿರುವಳು. ಅಣ್ಣನು ಈ ನಾಮಪದದ ಸ್ಥಳದಲ್ಲಿ ನೀನು ಬಂದಿದೆ.

**ಗುರು—ಬಾಲಕರೇ, ನೀವು ಇನ್ನು ಹೊಸ ಪುಸ್ತಕವನ್ನು ಓದಲಾರಂಭಿಸುತ್ತೀರಿ.**

ಇಲ್ಲಿ ನೀವು ಎಂದರೆ ಬಾಲಕರು; ಬಾಲಕರನ್ನು ಕುರಿತು ಗುರು ಮಾತಾಡಿದ್ದಾನೆ. ಯಾರನ್ನು ಕುರಿತು ಮಾತಾಡುವರೋ ಅವರ ಹೆಸರಿನ ಸ್ಥಳದಲ್ಲಿ **ನೀನು ನೀವು**, ಎಂಬ ಶಬ್ದಗಳನ್ನು ಉಪಯೋಗಿಸುವರು.
**ನಾನು, ನಾವು, ನೀನು, ನೀವು, ಈ ಶಬ್ದಗಳು ಸರ್ವನಾಮಗಳು.**

## ಅಭ್ಯಾಸ

(೧) ನಾನು, ನೀನು, ನಾವು, ನೀವು ಈ ಸರ್ವನಾಮಗಳಲ್ಲಿ ಒಂದೊಂದನ್ನು ಉಪಯೋಗಿಸಿ ಒಂದೊಂದು ವಾಕ್ಯವನ್ನು ಮಾಡಿರಿ.

(೨) ಕೆಳಗಿನ ಮಾತುಗಳಲ್ಲಿ ತೆರವಿದ್ದ ಸ್ಥಳಗಳಲ್ಲಿ ತಕ್ಕ ಸರ್ವನಾಮವನ್ನು ಸೇರಿಸಿರಿ:—

ತಂಗಿ — ಅಣ್ಣ....ಹೀಗೆ ನೂಕಬೇಕೇ?....ಕಾಲಿಟ್ಟದ್ದರಿಂದ ಕನ್ನಡಿಯು ಒಡೆಯಿತು.

ಅಣ್ಣ —...ನೂಕಿದರೇನಾಯಿತು?...ಕನ್ನಡಿಯ ಮೇಲೆ ಕಾಲಿಡಬೇಕೇ?

ತಂಗಿ —....ಕನ್ನಡಿಯನ್ನೇಕೆ ಒಡೆದಿರೆಂದು ಅವ್ವನು ಸಿಟ್ಟು ಮಾಡುವಳು.

ಅಣ್ಣ — ....ಕನ್ನಡಿಯನ್ನು ಒಡೆದಿಲ್ಲವೆಂದು ಹೇಳಿದರಾಯಿತು.

# ೧೨. ಸರ್ವನಾಮ (೩)

೧. ಮರವನ್ನು ಯಾವನು ಕಡಿದನು ?

೨. ಮರವನ್ನು ಯಾರು ಕಡಿದರು ?

ಮರವನ್ನು ಕಲ್ಲನು ಕಡಿದನೋ ಭೀಮನು ಕಡಿದನೋ ಮೊದಲಾಗಿ ಕೇಳುವದಿದ್ದರೆ ಯಾವನು ಕಡಿದನು, ಇಲ್ಲವೆ ಯಾರು ಕಡಿದರು ಎಂದು ಕೇಳುವೆವು. ಇಲ್ಲಿ ಯಾವನು ಯಾರು ಎಂದರೆ, ಕಲ್ಲ, ಭೀಮ ಮುಂತಾದವರು. ಈ ನಾಮಪದಗಳ ಸ್ಥಳದಲ್ಲಿ ಯಾವನು, ಯಾರು, ಇವು ಬಂದಿವೆ.

೧. ಇಲ್ಲಿ ಯಾವಳು ಓದುವಳು ? ೨. ಇಲ್ಲಿ ಯಾರು ಓದುವರು ?

ಗಂಗೆ ಓದುವಳೋ ಮಲ್ಲಕ್ಕನು ಓದುವಳೋ ಮೊದಲಾಗಿ ಕೇಳುವದಿದ್ದರೆ ನಾವು ಯಾವಳು ಓದುವಳು, ಇಲ್ಲವೆ ಯಾರು ಓದುವರು ಎಂದು ಕೇಳುವೆವು. ಇಲ್ಲಿ ಯಾವಳು, ಯಾರು, ಎಂದರೆ ಗಂಗೆ, ಮಲ್ಲಕ್ಕ ಮುಂತಾದವರು; ಈ ನಾಮಗಳ ಸ್ಥಳದಲ್ಲಿ ಯಾವಳು, ಯಾರು ಇವು ಬಂದಿವೆ.

೧. ಅಲ್ಲಿ ಯಾವದು ಮಲಗಿದೆ ? ೨. ಅಲ್ಲಿ ಯಾವವು ಮಲಗಿವೆ?

ಆಕಳು ಮಲಗಿದೆಯೋ ಎಮ್ಮೆ ಮಲಗಿದೆಯೋ ಮೊದಲಾಗಿ ಕೇಳುವದಿದ್ದರೆ ಯಾವದು ಮಲಗಿದೆ ಎಂದು ಕೇಳುವೆವು. ಆಕಳುಗಳು ಮಲಗಿವೆಯೋ ಮೊದಲಾಗಿ ಕೇಳುವದಿದ್ದರೆ ಯಾವವು ಮಲಗಿವೆ ಎಂದು ಕೇಳುವೆವು. ಇಲ್ಲಿ ಯಾವದು, ಯಾವವು ಎಂದರೆ ಆಕಳು, ಆಕಳುಗಳು, ಎಮ್ಮೆ, ಎಮ್ಮೆಗಳು ಮುಂತಾದವು. ಈ ನಾಮಪದಗಳ ಸ್ಥಳದಲ್ಲಿ ಯಾವದು, ಯಾವವು ಎಂಬಿವು ಇಲ್ಲಿ ಬಂದಿವೆ.

**ಯಾವನು, ಯಾವಳು, ಯಾರು, ಯಾವದು, ಯಾವವು ಈ ಶಬ್ದಗಳು ಸರ್ವನಾಮಗಳು.**

೧. ಭಿಮನು ತಾನು ಬರುವೆನೆಂದು ಹೇಳಿದನು.

೨. ಹುಡುಗಿಯರು ತಾವು ಹಾಡುವೆವೆಂದು ಹೇಳಿದರು.

೧ನೆಯ ವಾಕ್ಯದಲ್ಲಿ ತಾನು ಎಂದರೆ ಭೀಮನು; ೨ನೆಯ ವಾಕ್ಯದಲ್ಲಿ

ತಾವು ಎಂದರೆ ಹುಡುಗಿಯರು. ಈ ನಾಮಪದಗಳ ಸ್ಥಳದಲ್ಲಿ ತಾನು ತಾವು ಬಂದಿವೆ. ತಾನು, ತಾವು ಈ ಶಬ್ದಗಳು **ಸರ್ವನಾಮಗಳು**.

ಅಭ್ಯಾಸ

ಕೆಳಗಿನ ವಾಕ್ಯಗಳಲ್ಲಿ ಬಂದ ಸರ್ವನಾಮಗಳನ್ನು ಹೇಳಿರಿ:— ಯಾವಳು ಮಾಲೆಯನ್ನು ಕಟ್ಟುವಳು? ಯಾರು ಗಂಧವನ್ನು ತೇಯುವರು? ಅಡಿಗೆಯನ್ನು ಯಾವನು ಮಾಡುವನು? ರಾಮಯ್ಯನು ತಾನು ಮಾಡುವೆನೆಂದನು.

ಈ ಮಾತನ್ನು ಯಾರು ಕೇಳಿದರು? ರಾಯರು ತಾವೇ ಕೇಳಿದರು. ಈ ಕೆಲಸಕ್ಕೆ ಯಾವದು ಬೇಕು, ಯಾವದು ಬೇಡ ಎಂಬದನ್ನು ಯಾರು ಹೇಳುವರು? ತಾವು ಈ ವಿಚಾರವನ್ನು ಮಾಡಬೇಕು.

(೨) ಯಾವಳು, ತಾವು, ಯಾವವು, ಯಾರು ಈ ಸರ್ವನಾಮಗಳನ್ನು ಉಪಯೋಗಿಸಿ ಒಂದೊಂದು ವಾಕ್ಯವನ್ನು ರಚಿಸಿರಿ.

ಮೇಲಿನ ಸರ್ವನಾಮಗಳ ಪಾಠಗಳಿಂದ ಕೆಳಗೆ ಬರೆದ ಶಬ್ದಗಳು ಸರ್ವನಾಮಗಳೆಂದು ತಿಳಿದುಕೊಂಡೆವು :—

**ಅವನು, ಆತನು, ಅವಳು, ಆಕೆ, ಅವರು, ಅದು, ಅವು, ಇವನು, ಈತನು, ಇವಳು, ಈಕೆ, ಇವರು, ಇದು, ಇವು. ನಾನು ನಾವು, ನೀನು, ನೀವು, ಯಾವನು, ಯಾವಳು, ಯಾರು ಯಾವದು, ಯಾವವು, ತಾನು, ತಾವು.**

---

## ೧೩. ಅವ್ಯಯ

೧. **ಬಳಿಕ ಧರ್ಮರಾಜನು ಬಂದನು.**

೨. **ಬಳಿಕ ದ್ರೌಪದಿ ಬಂದಳು.**

ಇಲ್ಲಿ ಎರಡು ವಾಕ್ಯಗಳಲ್ಲಿಯೂ ಬಳಿಕ ಎಂಬ ಶಬ್ದವು ಬಂದಿದೆ.

**೧. ಮತ್ತೆ ರಾಮನು ಬಂದನು ೨. ಮತ್ತೆ ಸೀತೆಯು ಬಂದಳು.**

ಇಲ್ಲಿ ಎರಡು ವಾಕ್ಯಗಳಲ್ಲಿಯೂ **ಮತ್ತೆ** ಎಂಬ ಶಬ್ದವು ಬಂದಿದೆ.

**೧. ಸಂಗನು ದೊಪ್ಪನೆ ಬಿದ್ದನು. ೨. ಗಂಗೆ ದೊಪ್ಪನೆ ಬಿದ್ದಳು.**

ಇಲ್ಲಿ ಎರಡು ವಾಕ್ಯಗಳಲ್ಲಿಯೂ **ದೊಪ್ಪನೆ** ಎಂಬ ಶಬ್ದವು ಬಂದಿದೆ.

ಬಳಿಕ, ಮತ್ತೆ, ದೊಪ್ಪನೆ ಇವು ನಾಮಗಳಲ್ಲ; ಏಕೆಂದರೆ, ಇವು ಹೆಸರುಗಳಲ್ಲ; ಸರ್ವನಾಮಗಳಲ್ಲ; ಏಕೆಂದರೆ, ಇವು ನಾಮಪದಗಳ ಸ್ಥಳದಲ್ಲಿ ಬಂದಿಲ್ಲ. ವಿಶೇಷಣಗಳಲ್ಲ; ಏಕೆಂದರೆ, ಎಂಥ ಇಲ್ಲವೆ ಎಷ್ಟು ಎಂದು ಇವು ವರ್ಣಿಸುವದಿಲ್ಲ. ಕ್ರಿಯಾಪದಗಳಲ್ಲ; ಏಕೆಂದರೆ, ಇವು ಕ್ರಿಯೆಯನ್ನು ಹೇಳುವದಿಲ್ಲ. ಬಳಿಕ, ಮತ್ತೆ, ದೊಪ್ಪನೆ ಈ ಶಬ್ದಗಳು ನಾಮ, ಸರ್ವನಾಮ, ವಿಶೇಷಣ, ಕ್ರಿಯಾಪದಗಳಿಂದ ಬೇರೆಯಾಗಿವೆ. ಈ ತರದ ಶಬ್ದಗಳು ಅವ್ಯ**ಯಗಳು**.

ಸಂಗನು, ಸಂಗನನ್ನು, ಸಂಗನಿಂದ ಮೊದಲಾದವು ಸಂಗ ಎಂಬ ನಾಮದ ಬೇರೆ ಬೇರೆ ರೂಪಗಳು. ಅವನು, ಅವನನ್ನು ಅವನಿಗೆ, ಅವರಲ್ಲಿ ಮುಂತಾದವು ಅವ ಎಂಬ ಸರ್ವನಾಮದ ಬೇರೆ ಬೇರೆ ರೂಪಗಳು. ಜಾಣನು, ಜಾಣನನ್ನು, ಜಾಣರಿಗೆ ಮುಂತಾದವು ಜಾಣ ಎಂಬ ವಿಶೇಷಣದ ಬೇರೆ ಬೇರೆ ರೂಪಗಳು. ತಿನ್ನುತ್ತಾನೆ, ತಿಂದಳು ಮುಂತಾದವು ತಿನ್ನು ಇದರಿಂದುಂಟಾದ ಬೇರೆ ಬೇರೆ ಕ್ರಿಯಾಪದ ರೂಪಗಳು.

ಈ ಮೇರೆಗೆ ಎಲ್ಲ ನಾಮಗಳೂ, ಸರ್ವನಾಮಗಳೂ, ವಿಶೇಷಣಗಳೂ ಕ್ರಿಯಾಪದಗಳೂ ಬೇರೆ ಬೇರೆ ರೂಪಗಳನ್ನು ಹೊಂದುವವು. ಬಳಿಕ, ಮತ್ತೆ, ದೊಪ್ಪನೆ ಮುಂತಾದ **ಅವ್ಯಯಗಳು ಬೇರೆ ಬೇರೆ ರೂಪಗಳನ್ನು ಹೊಂದುವದಿಲ್ಲ.**

ವಾಕ್ಯಗಳಲ್ಲಿ ನಾಮ, ಸರ್ವನಾಮ, ವಿಶೇಷಣ ಕ್ರಿಯಾಪದಗಳಲ್ಲದ **ಕೆಲವು ಶಬ್ದಗಳು ಬರುವವು. ಅವುಗಳಿಗೆ ಬೇರೆ ಬೇರೆ** ರೂಪಗಳು ಆಗುವ **ದಿಲ್ಲ; ಅವು ಅವ್ಯಯಗಳು.**

### ಅಭ್ಯಾಸ

೧. ಕೆಳಗಿನ ಕಥೆಯಲ್ಲಿ ಬಂದ ಅವ್ಯಯಗಳನ್ನು ನೋಡಿರಿ:—

ಒಂದು ಕಾಗೆ ಒಂದು ಆಡಿನ **ಸಂಗಡ** ತಿರುಗಾಡುತ್ತಾ ತಟ್ಟನೆ ಅದರ ಬೆನ್ನನ್ನು ಹತ್ತಿತು; **ಮತ್ತು** ತನ್ನ ಚುಂಚುವಿನಿಂದ **ಕಟಕಟ** ಕುಕ್ಕತೊಡಗಿತು. ಆಗ ಆಡು ಕಾಗೆಗೆ ಇಂತು ನುಡಿಯಿತು:—ಎಲೈ ನೀನು ನನ್ನನ್ನು **ಹೀಗೆ** ಕುಕ್ಕಬೇಕೇ? ಇನ್ನು ಬಿಡು; **ಅಯ್ಯೋ** ನನ್ನ ಮೈ **ಭಗಭಗೆ** ಉರಿಯುತ್ತಿದೆ! ಇದಕ್ಕೆ ಕಾಗೆ-ನಾನು **ಸುಮ್ಮನೆ** ಇರುವವರನ್ನು **ಚೆನ್ನಾಗಿ** ಕಾಡದೆ ಬಿಡುವದಿಲ್ಲ ಎಂದು ಹೇಳಿತು.

೨. ಕೆಳಗಿನ ವಾಕ್ಯಗಳಲ್ಲಿ ತಕ್ಕ ಅವ್ಯಯಗಳನ್ನು ಸೇರಿಸಿರಿ:—

ರಾಮನು....ಭೀಮನು ಹೋದರು. ನಿನ್ನ....ಯಾರು ಬರಬೇಕು? ....ಇವರು ಎಷ್ಟು ಮೂರ್ಖರು! ಯಾವ ಕೆಲಸವನ್ನೂ....ಮಾಡುವದಿಲ್ಲ.

---

## ೧೪. ನಾಮಪದ ಕ್ರಿಯಾಪದಗಳ ಲಿಂಗಗಳು

**೧. ಮಲ್ಲನು ಹಾಡುವನು. ೨. ಗೆಳೆಯನು ಬಂದನು.**

ಇಲ್ಲಿ ಮಲ್ಲ, ಗೆಳೆಯ ಎಂಬವು ಗಂಡಸರ ಹೆಸರುಗಳು. **ಗಂಡಸರ ಹೆಸರುಗಳು ಪುಲ್ಲಿಂಗದವು.** ಆದದರಿಂದ ಮಲ್ಲ, ಗೆಳೆಯ, ಹುಡುಗ ಮೊದಲಾದ ನಾಮಗಳು ಪುಲ್ಲಿಂಗದವು.

ಹಾಡುವನು, ಬಂದನು ಎಂಬವು ಗಂಡಸರನ್ನು ತೋರಿಸುವ ಕ್ರಿಯಾಪದಗಳು. **ಗಂಡಸರನ್ನು ತೋರಿಸುವ ಕ್ರಿಯಾಪದಗಳು ಪುಲ್ಲಿಂಗದವು.** ಆದದರಿಂದ ಹಾಡುವನು ಮೊದಲಾದ ಕ್ರಿಯಾಪದಗಳೂ ಪುಲ್ಲಿಂಗದವು.

**೧. ಕಮಲೆ ಹಾಡುವಳು. ೨. ಗೆಳತಿ ಬಂದಳು.**

ಇಲ್ಲಿ ಕಮಲೆ, ಗೆಳತಿ, ಎಂಬವು ಹೆಂಗಸರ ಹೆಸರುಗಳು. **ಹೆಂಗಸರ ಹೆಸರುಗಳು ಸ್ತ್ರೀಲಿಂಗದವು.** ಆದದರಿಂದ ಕಮಲೆ, ಗೆಳತಿ, ಹುಡುಗಿ

ಮುಂತಾದ ನಾಮಗಳು ಸ್ತ್ರೀಲಿಂಗದವು. ಹಾಡುವಳು, ಬಂದಳು ಇವು **ಹೆಂಗಸರನ್ನು ತೋರಿಸುವ ಕ್ರಿಯಾಪದಗಳು.** ಆದದರಿಂದ ಹಾಡುವಳು, ಬಂದಳು ಮುಂತಾದ ಕ್ರಿಯಾಪದಗಳೂ ಸ್ತ್ರೀಲಿಂಗದವು.

೧. **ಹಕ್ಕಿ ಹಾರಿತು.** ೨. **ಚಿನ್ನವು ಹೊಳೆಯುವದು**

ಇಲ್ಲಿ ಹಕ್ಕಿ, ಚಿನ್ನ ಎಂಬವು ಗಂಡಸರೂ ಹೆಂಗಸರೂ ಅಲ್ಲದವುಗಳ ಹೆಸರುಗಳು. **ಗಂಡಸರೂ ಹೆಂಗಸರೂ ಅಲ್ಲದವುಗಳ ಹೆಸರುಗಳು ನಪುಂಸಕ ಲಿಂಗದವು.** ಆದದರಿಂದ ಹಕ್ಕಿ, ಚಿನ್ನ, ಹೂವು, ಮೊದಲಾದ ನಾಮಗಳು ನಪುಂಸಕ ಲಿಂಗದವು. ಹಾರಿತು, ಹೊಳೆಯುವದು ಇವು ಗಂಡಸರೂ ಹೆಂಗಸರೂ ಅಲ್ಲದವುಗಳನ್ನು ತೋರಿಸುವವು. ಆದದರಿಂದ ಹಾರಿತು ಮೊದಲಾದ ಕ್ರಿಯಾಪದಗಳೂ ನಪುಂಸಕಲಿಂಗದವು.

ಅಭ್ಯಾಸ

ಕೆಳಗೆ ಕೊಟ್ಟ ವಾಕ್ಯಗಳಲ್ಲಿ ಬಂದ ನಾಮಪದ ಕ್ರಿಯಾಪದಗಳ ಲಿಂಗಗಳನ್ನು ಹೇಳಿರಿ:—

ಅರಸನು ರಾಜ್ಯವನ್ನು ಆಳುತ್ತಾನೆ. ಸೂರ್ಯನು ಪೂರ್ವದಿಕ್ಕಿನಲ್ಲಿ ಮೂಡುವನು. ಗಂಗೆಯು ಹಣ್ಣುಗಳನ್ನು ಮಾರುವಳು. ಆಡು ಗಿಡಗಳ ಎಲೆಗಳನ್ನು ತಿನ್ನುವದು. ಪಾರ್ವತಿ ಶಿವನ ಹೆಂಡತಿಯು. ನಾನು ಜಾಣೆ, ಅವಳು ನನ್ನ ಗೆಳತಿಯು.

---

## ೧೫. ನಾಮಪದ ಕ್ರಿಯಾಪದಗಳ ವಚನಗಳು.

೧. **ಗೆಳೆಯನು ಬಂದನು** ಗೆಳೆಯರು ಬಂದರು.

೨. ಹುಡುಗಿಯು ಆಡುತ್ತಾಳೆ. **ಹುಡುಗಿಯರು ಆಡುತ್ತಾರೆ.**

೩. ಮರವು ಬೆಳೆಯುವದು. ಮರಗಳು ಬೆಳೆಯುವವು.

ಗೆಳೆಯನು ಎಂದರೆ ಒಬ್ಬನು, ಗೆಳೆಯರು ಎಂದರೆ ಒಬ್ಬನಿಗಿಂತ ಹೆಚ್ಚಿಗೆ; ಹುಡುಗಿ ಎಂದರೆ ಒಬ್ಬಳು, ಹುಡುಗಿಯರು ಎಂದರೆ ಒಬ್ಬಳಿಗಿಂತ ಹೆಚ್ಚಿಗೆ; ಮರವು ಎಂದರೆ ಒಂದು, ಮರಗಳು ಎಂದರೆ ಒಂದಕ್ಕಿಂತ ಹೆಚ್ಚಿಗೆ;

ಹುಡುಗನು, ಹುಡುಗಿ, ಮರವು ಎಂದು ಹೇಳಿದಾಗ ಒಂದು ಈ ಸಂಖ್ಯೆ ತೋರುವದು. ಹುಡುಗರು, ಹುಡುಗಿಯರು, ಮರಗಳು ಎಂದು ಹೇಳಿದಾಗ ಒಂದಕ್ಕಿಂತ ಹೆಚ್ಚಿನ ಸಂಖ್ಯೆ ತೋರುವದು. ಒಂದು ಈ ಸಂಖ್ಯೆಗೆ ಏಕ ಎಂದು ಹೆಸರು. ಒಂದಕ್ಕಿಂತ ಹೆಚ್ಚಿನ ಸಂಖ್ಯೆಗೆ ಬಹು ಎಂದು ಹೆಸರು.

**ಒಂದು ಈ ಸಂಖ್ಯೆಯನ್ನು ತಿಳಿಸುವ ಪದಗಳು ಏಕವಚನದವು; ಒಂದಕ್ಕಿಂತ ಹೆಚ್ಚಿನ ಸಂಖ್ಯೆಯನ್ನು ತಿಳಿಸುವ ಪದಗಳು ಬಹುವಚನದವು.** (ಏಕವಚನ = ಒಂದು ಈ ಸಂಖ್ಯೆಯನ್ನು ಹೇಳುವ)

ಹುಡುಗನು, ಹುಡುಗಿಯು, ಮರವು ಮೊದಲಾದ ಪದಗಳು ಏಕವಚನದವು; ಹುಡುಗರು, ಹುಡುಗಿಯರು, ಮರಗಳು ಮೊದಲಾದ ಪದಗಳು ಬಹುವಚನದವು.

ಬಂದನು ಎಂದರೆ ಒಬ್ಬನು; ಬಂದರು ಎಂದರೆ ಒಬ್ಬನಿಗಿಂತ ಹೆಚ್ಚಿಗೆ ಜನರು. ಬಂದನು ಎಂದು ಹೇಳಿದಾಗ ಒಂದು ಈ ಸಂಖ್ಯೆ ತೋರುವದು. ಬಂದರು ಎಂದು ಹೇಳಿದಾಗ, ಒಂದಕ್ಕಿಂತ ಹೆಚ್ಚಿನ ಸಂಖ್ಯೆ ತೋರುವದು. ಆದದರಿಂದ ಬಂದನು, ಆಡುತ್ತಾಳೆ, ಬೆಳೆಯುವದು ಮೊದಲಾದ ಕ್ರಿಯಾಪದಗಳು ಏಕವಚನದವು. ಬಂದರು, ಆಡುತ್ತಾರೆ, ಬೆಳೆಯುವವು ಮೊದಲಾದ ಕ್ರಿಯಾಪದಗಳು ಬಹುವಚನದವು.

## ಅಭ್ಯಾಸ

೧. ಕೆಳಗಿನ ವಾಕ್ಯಗಳಲ್ಲಿ ಏಕವಚನದ ಪದಗಳು ಯಾವವು? ಬಹುವಚನದ ಪದಗಳು ಯಾವವು?

ಮರವು ದಾರಿಕಾರರಿಗೆ ನೆಳಲನ್ನು ಕೊಡುವದು; ಆಡು-ಕುರಿಗಳು ಮರದ ಎಲೆಗಳನ್ನು ತಿನ್ನುವವು. ಹಕ್ಕಿಗಳು ಅದರ ಹಣ್ಣುಗಳಿಂದ ಜೀವಿಸುತ್ತವೆ. ಸೂರ್ಯನು ನಮಗೆ ಬೆಳಕನ್ನು ಕೊಡುವನು. ಆಕೆ ಜಾಣೆ.

೨. ಕೆಳಗೆ ಏಕವಚನದ ಪದಗಳಿದ್ದಲ್ಲಿ ಬಹುವಚನದ ಪದಗಳನ್ನೂ ಬ. ವ. ದ ಪದಗಳಿದ್ದಲ್ಲಿ ಏ. ವ. ದ ಪದಗಳನ್ನೂ ಹಾಕಿರಿ :—

ಹೆಂಗಸು ಹಾಡುತ್ತಾಳೆ. ಹುಡುಗರು ಮಲಗಿದರು. ಶಿಷ್ಯನಿಗೆ ಬರಲಿಲ್ಲ ಗುರುಗಳಿಗೆ ಮರೆಯಲಿಲ್ಲ. ಪ್ರಜೆಯನ್ನು ಪಾಲಿಸಬಲ್ಲವರೇ ಅರಸರು. ಗೆಳತಿಯು ಊರಿಗೆ ಹೋದಳು. ಕ್ರಿಯಾಪದವು ಕ್ರಿಯೆಯನ್ನು ಹೇಳುವದು.

---

## ೧೬. ಕ್ರಿಯಾಪದಗಳ ಕಾಲಗಳು

**೧. ಭೀಮನು ಮರವನ್ನು ಕಡಿಯುತ್ತಾನೆ.**
**೨. ಸೀತೆಯು ಪುಸ್ತಕವನ್ನು ಓದುತ್ತಾಳೆ.**

೧ನೆಯ ವಾಕ್ಯದಲ್ಲಿ ಕಡಿಯುತ್ತಾನೆ ಈ ಕ್ರಿಯಾಪದದಿಂದ ಕಡಿಯುವ ಕ್ರಿಯೆ ಈಗ ನಡೆದಿದೆ; ಇನ್ನೂ ಮುಗಿದಿಲ್ಲ ಎಂದು ತಿಳಿಯುವದು. ೨ನೆಯ ವಾಕ್ಯದಲ್ಲಿ ಓದುತ್ತಾಳೆ ಈ ಕ್ರಿಯಾಪದದಿಂದ ಓದುವ ಕ್ರಿಯೆ ಈಗ ನಡೆದಿದೆ; ಇನ್ನೂ ಮುಗಿದಿಲ್ಲ ಎಂದು ತಿಳಿಯುವದು. **ಕ್ರಿಯೆ ನಡೆಯುತ್ತಿರುವ ಕಾಲಕ್ಕೆ ವರ್ತಮಾನಕಾಲ** ಎಂಬ ಹೆಸರು. ವರ್ತಮಾನ ಎಂದರೆ ಈಗ ನಡೆಯುವ ಎಂಬ ಅರ್ಥವು. ಕಡಿಯುತ್ತಾನೆ, ಓದುತ್ತಾಳೆ ಈ ತರದ ಕ್ರಿಯಾಪದಗಳು ವರ್ತಮಾನಕಾಲದವು.

**೧. ಭೀಮನು ಮರವನ್ನು ಕಡಿದನು.**
**೨. ಸೀತೆಯು ಪುಸ್ತಕವನ್ನು ಓದಿದಳು.**

೧ನೆಯ ವಾಕ್ಯದಲ್ಲಿ ಕಡಿದನು ಈ ಕ್ರಿಯಾಪದದಿಂದ ಕಡಿಯುವ ಕ್ರಿಯೆ ಈ ಮೊದಲೇ ನಡೆಯಿತು; ಕಡಿಯುವದು ಈಗ ಮುಗಿದಿದೆ ಎಂದು ತಿಳಿಯುವದು. ೨ನೆಯ ವಾಕ್ಯದಲ್ಲಿ ಓದಿದಳು ಈ ಕ್ರಿಯಾಪದದಿಂದ ಓದುವ ಕ್ರಿಯೆ ಈ ಮೊದಲೇ ನಡೆಯಿತು; ಓದುವದು ಈಗ ಮುಗಿದು ಹೋಗಿದೆ ಎಂದು ತಿಳಿಯುವದು. **ಕ್ರಿಯೆ ನಡೆದು ಹೋದ ಕಾಲಕ್ಕೆ ಭೂತಕಾಲ** ಎಂಬ ಹೆಸರು. ಕಡಿದನು, ಓದಿದಳು ಈ ತರದ ಕ್ರಿಯಾಪದಗಳು ಭೂತಕಾಲದವು.

**೧. ಭೀಮನು ಗಿಡವನ್ನು ಕಡಿಯುವನು.**
**೨. ಸೀತೆಯು ಪುಸ್ತಕವನ್ನು ಓದುವಳು.**

೧ನೆಯ ವಾಕ್ಯದಲ್ಲಿ ಕಡಿಯುವನು ಈ ಕ್ರಿಯಾಪದದಿಂದ ಕಡಿಯುವ ಕ್ರಿಯೆ ಇನ್ನು ಮುಂದೆ ನಡೆಯುವದು ಎಂದು ತಿಳಿಯುವದು. ೨ನೆಯ ವಾಕ್ಯದಲ್ಲಿ ಓದುವಳು ಈ ಕ್ರಿಯಾಪದದಿಂದ ಓದುವ

ಕ್ರಿಯೆ ಇನ್ನು ಮುಂದೆ ನಡೆಯುವದು ಎಂದು ತಿಳಿಯುವದು. **ಮುಂದೆ ಬರುವ ಕಾಲಕ್ಕೆ ಭವಿಷ್ಯತ್ಕಾಲ** ಎಂಬ ಹೆಸರು. ಕಡಿಯುವನು, ಓದುವನು, ಓದುವಳು ಈ ತರದ ಕ್ರಿಯಾಪದಗಳು ಭವಿಷ್ಯತ್ಕಾಲದವು.

**ವರ್ತಮಾನಕಾಲ, ಭೂತಕಾಲ, ಭವಿಷ್ಯತ್ಕಾಲ ಇವು ಮೂರು ಕ್ರಿಯಾಪದಗಳ ಕಾಲಗಳು**

---

ಅಭ್ಯಾಸದ ಪ್ರಶ್ನಗಳು

(ಅ) ಕೆಳಗಿನ ವಾಕ್ಯಗಳಲ್ಲಿ ಬಂದ ಕ್ರಿಯಾಪದಗಳ ಕಾಲವನ್ನು ಹೇಳಿರಿ:—

ಮಂಗಗಳು ಹಣ್ಣನ್ನು ತಿನ್ನುತ್ತವೆ. ನಾಳೆ ಮಳೆ ಆಗುವದು. ನೀಲಕ್ಕನು ಅಡಿಗೆಯನ್ನು ಮಾಡುತ್ತಾಳೆ. ಹುಡುಗರು ಲೆಕ್ಕವನ್ನು ಮಾಡಿದರು. ಸಾಲೆಯು ಪರೀಕ್ಷೆ ಸಂಜೆಗೆ ಮುಗಿಯುವದು. ಹುಡುಗಿ ನಕ್ಕಳು.

(ಬ) ಕೆಳಗೆ ತೆರವಿಟ್ಟಲ್ಲಿ ಭೂತಕಾಲದ ಕ್ರಿಯಾಪದಗಳನ್ನು ಹಾಕಿರಿ. ೧. ರಾಮನು ಲೆಕ್ಕವನ್ನು.... ೨. ಕಲ್ಲನು ಪುಸ್ತಕವನ್ನು.... ೩. ಕುದುರೆಯು ನಿನ್ನೆ........ ೪. ಸಾವಿತ್ರಿಯು........ ೫. ಭೀಮನು ಸಾಲೆಗೆ........

(ಕ) ಕೆಳಗೆ ತೆರವಿಟ್ಟಲ್ಲಿ ಭವಿಷ್ಯತ್ಕಾಲದ ಕ್ರಿಯಾಪದಗಳನ್ನು ಹಾಕಿರಿ. ೧. ಮುಡಿವರೆ ಸುಖವು.... ೨. ಸೂರ್ಯನು ಪಶ್ಚಿಮಕ್ಕೆ.... ೩. ಸಾವಿತ್ರಿ ಅತ್ತೆಯ ಮನೆಗೆ.... ೪. ಮಳೆಯಾದರೆ ಬೆಳೆ.... ೫. ಕೆರೆಗಳು....

(ಡ) ಕೆಳಗೆ ತೆರವಿಟ್ಟಲ್ಲಿ ವರ್ತಮಾನಕಾಲದ ಕ್ರಿ.ಪ. ಗಳನ್ನು ಹಾಕಿರಿ. ೧. ಸೂರ್ಯನು ಪೂರ್ವಕ್ಕೆ........ ೨. ಹೊಳೆಗಳು ಸಮುದ್ರಕ್ಕೆ............ ೩. ಕಮಲೆ........ ೪. ಕೂಸುಗಳು ಹಗಲು........ (ಮಲಗು)

(ಈ) ವರ್ತಮಾನಕಾಲವೆಂದರೇನು? ಅದರ ಮುಂದಿನ ಕಾಲ ವಾವದು? ಹಿಂದಿನ ಕಾಲವು ಯಾವದು?

(ಫ) ಕೆಳಗಿನ ವಾಕ್ಯಗಳಲ್ಲಿ ಕ್ರಿಯಾಪದಗಳು ತಪ್ಪಿದ್ದರೆ ತಿದ್ದಿರಿ:— ಸಾಹೇಬರು ನಾಳೆ ಸಾಲೆಗೆ ಬಂದರು. ನಾನು ಹೋದ ವರ್ಷ ಪರೀಕ್ಷೆಯಲ್ಲಿ ಪಾಸಾಗುತ್ತೇನೆ. ವಿದ್ಯೆಯನ್ನು ಕಲಿತರೆ ಸುಖವು ಆಯಿತು. ನಾಳೆಯ ದಿವಸವೇ ಇದನ್ನು ಕಲಿತೆನು. ನಾಳೆ ಮಳೆಯಾದರೆ ಬೆಳೆ ಬರುತ್ತದೆ.

# ನುಡಿಗನ್ನಡಿ

(೧ನೆಯ ಭಾಗ)

## ೨ನೆಯ ಖಂಡ

### ೧. ವಾಕ್ಯ (ಆಖ್ಯೇಯ, ಆಖ್ಯಾತ)

**೧. ರಾಮನು ಓಡುತ್ತಾನೆ. ೨. ನವಿಲುಗಳು ಕುಣಿಯುವವು.**

೧ನೆಯ ವಾಕ್ಯದಲ್ಲಿ ರಾಮನು ಈ ಪದದಿಂದ ರಾಮನ ವಿಷಯವಾಗಿ ಹೇಳಿದೆ ಎಂದು ತಿಳಿಯುವದು; ಮತ್ತು ಓಡುತ್ತಾನೆ ಈ ಪದದಿಂದ ಅವನು ಓಡುವ ಕೆಲಸವನ್ನು ಮಾಡುತ್ತಾನೆ ಎಂದು ತಿಳಿಯುವದು. ೨ನೆಯ ವಾಕ್ಯದಲ್ಲಿ ನವಿಲುಗಳ ವಿಷಯವಾಗಿ ಹೇಳಿದೆ; ಮತ್ತು ಅವು ಕುಣಿಯುವ ಕೆಲಸವನ್ನು ಮಾಡುವವು ಎಂಬ ವಿಚಾರವು ಹೇಳಿದೆ.

ವಾಕ್ಯದಲ್ಲಿ ಯಾವದೊಂದರ ವಿಷಯವಾಗಿ ಹೇಳಿರುತ್ತದೆ, ಮತ್ತು ಒಂದು ವಿಚಾರವು ಹೇಳಿರುತ್ತದೆ. ಹೀಗೆ ವಾಕ್ಯದಲ್ಲಿ ಯಾವುದರ ವಿಷಯವಾಗಿ ಹೇಳಿದೆಯೋ ಅದು ಒಂದು ಭಾಗ; ಯಾವ ವಿಚಾರವು ಹೇಳಿದೆಯೋ ಅದು ಒಂದು ಭಾಗ, ಹೀಗೆ ಎರಡು ಭಾಗಗಳಿರುವವು. ಯಾವುದರ ವಿಷಯವಾಗಿ ಹೇಳಿದೆಯೋ ಅದಕ್ಕೆ **ಆಖ್ಯೇಯ** ಎಂಬ ಹೆಸರು. ಯಾವ ವಿಚಾರವು ಹೇಳಿದೆಯೋ ಅದಕ್ಕೆ **ಆಖ್ಯಾತ** ಎಂಬ ಹೆಸರು. ಮೇಲಿನ ೧ನೆಯ ವಾಕ್ಯದಲ್ಲಿ ಆಖ್ಯೇಯವು ಯಾವದು? ಆಖ್ಯಾತವು ಯಾವದು?

#### ಅಭ್ಯಾಸ

೧. ಕೆಳಗಿನ ವಾಕ್ಯಗಳಲ್ಲಿ ಯಾವದರ ವಿಷಯವಾಗಿ ಹೇಳಿದೆ? ಯಾವ ವಿಚಾರವು ಹೇಳಿದೆ?

೧. ಮಳೆ ಸುರಿಯಿತು. ೨. ಹುಡುಗಿ ನಾಚುವಳು ೩. ಹುಡುಗರು ಓಡುತ್ತಾರೆ. ೪. ಕೂಸು ಎದ್ದಿತು. ೫. ಕಾಜು ಒಡೆಯಿತು.

೨. ಈ ಮೇಲಿನ ವಾಕ್ಯಗಳಲ್ಲಿ ಆಖ್ಯೇಯವು ಯಾವದು? ಆಖ್ಯಾತವು ಯಾವದು?

## ೨. ವಾಕ್ಯ (ಆಖ್ಯೇಯ, ಆಖ್ಯಾತ)

**ಅರಸನು ಪ್ರಜೆಗಳನ್ನು ಸಲಹುತ್ತಾನೆ.**

ಈ ವಾಕ್ಯದಲ್ಲಿ ಅರಸನು ಆಖ್ಯೇಯವು, ಸಲಹುತ್ತಾನೆ ಆಖ್ಯಾತವು ಎಂಬದನ್ನು ನೀವು ಕಲಿತಿರುವಿರಿ. ಪ್ರಜೆಗಳನ್ನು ಎಂಬುದು ಯಾರನ್ನು ಸಲಹುತ್ತಾನೆ ಎಂಬುದನ್ನು ತಿಳಿಸುವದು. ಅದು ಸಲಹುತ್ತಾನೆ ಈ ಆಖ್ಯಾತಕ್ಕೆ ಸಂಬಂಧಿಸಿ ಬಂದಿದೆ. **ಆದದರಿಂದ** ಆಖ್ಯಾತಕ್ಕೆ ಸಂಬಂಧಿಸಿದ ಪ್ರಜೆಗಳನ್ನು ಎಂಬಿದೂ **ಆಖ್ಯಾತ** ಭಾಗಕ್ಕೆ ಸೇರುವದು.

ಅರಸನು—**ಆಖ್ಯೇಯ,** ಪ್ರಜೆಗಳನ್ನು ಸಲಹುತ್ತಾನೆ—**ಆಖ್ಯಾತ.**

**ಉತ್ತಮನಾದ ಅರಸನು ಪ್ರಜೆಗಳನ್ನು ಸಲಹುತ್ತಾನೆ.**

ಈ ವಾಕ್ಯದಲ್ಲಿ ಮೇಲಿನ ವಾಕ್ಯಕ್ಕಿಂತ ಉತ್ತಮನಾದ ಎಂಬ ಪದವು ಹೆಚ್ಚಿಗೆ ಬಂದಿದೆ. ಅದು 'ಅರಸನು' ಎಂಬ ಆಖ್ಯೇಯಕ್ಕೆ ವಿಶೇಷಣವಾಗಿ ಇರುವದರಿಂದ ಅದಕ್ಕೆ ಸಂಬಂಧಿಸಿದೆ. ಆದದರಿಂದ ಉತ್ತಮನಾದ ಈ ಪದವು ಆಖ್ಯೇಯ ಭಾಗಕ್ಕೆ ಸೇರುವದು.

| **ಆಖ್ಯೇಯ.** | **ಆಖ್ಯಾತ** |
| --- | --- |
| ಉತ್ತಮನಾದ ಅರಸನು | ಪ್ರಜೆಗಳನ್ನು ಸಲಹುತ್ತಾನೆ. |

**ಉತ್ತಮನಾದ ಅರಸನು ಪ್ರಜೆಗಳನ್ನು ಚೆನ್ನಾಗಿ ಸಲಹುತ್ತಾನೆ.**

ಈ ವಾಕ್ಯದಲ್ಲಿ ಚೆನ್ನಾಗಿ ಎಂಬ ಪದವು ಹೆಚ್ಚಿಗೆ ಬಂದಿದೆ; ಹೇಗೆ ಸಲಹುತ್ತಾನೆ ಎಂಬದನ್ನು ತಿಳಿಸುವದರಿಂದ ಅದು ಸಲಹುತ್ತಾನೆ ಈ ಆಖ್ಯಾತಕ್ಕೆ ಸಂಬಂಧಿಸಿದೆ. ಆದದರಿಂದ ಅದು ಆಖ್ಯಾತ ಭಾಗದಲ್ಲಿ ಸೇರುವದು.

| **ಆಖ್ಯೇಯ** | **ಆಖ್ಯಾತ** |
| --- | --- |
| ಉತ್ತಮನಾದ ಅರಸನು | ಪ್ರಜೆಗಳನ್ನು ಚೆನ್ನಾಗಿ ಸಲಹುತ್ತಾನೆ. |

ಈ ಮೇರೆಗೆ ಆಖ್ಯೇಯದ ವಿಷಯವಾಗಿಯೂ ಆಖ್ಯಾತದ ವಿಷಯವಾಗಿಯೂ ಹೆಚ್ಚಿಗೆ ಹೇಳುವದಾದರೆ ವಾಕ್ಯದಲ್ಲಿ ಅವಕ್ಕೆ ಸಂಬಂಧಿಸಿದ ಹೆಚ್ಚಿನ ಪದಗಳು ಬರುವವು.

ಅಭ್ಯಾಸ

ಕೆಳಗಿನ ವಾಕ್ಯಗಳಲ್ಲಿ ಆಖ್ಯೇಯ ಆಖ್ಯಾತಗಳನ್ನು ಅವುಗಳಿಗೆ ಸಂಬಂಧಿಸಿದ ಪದಗಳೊಡನೆ ವಿಂಗಡಿಸಿರಿ. :—

೧. ಸಂಗನು ಹಣವನ್ನು ಸಂಪಾದಿಸಿದನು. ೨. ಸಿರುದ್ಯೋಗಿಯಾದ ಕಲ್ಲನು ಹಣವನ್ನು ಕಳೆದುಕೊಂಡನು. ೩. ಮಲ್ಲನು ಚೆನ್ನಾಗಿ ಈಸುವನು. ೪. ಒಳ್ಳೆಯ ಜನರು ಯಾವಾಗಲೂ ಸತ್ಯವನ್ನು ಆಡುತ್ತಾರೆ.

## ೩. ವಾಕ್ಯ

**೧. ಹುಡುಗರು ಚೆಂಡಿನ ಆಟವನ್ನು ಆಡುತ್ತಾರೆ.**

**೨. ಉತ್ತಮನಾದ ಅರಸನು ಪ್ರಜೆಗಳನ್ನು ಚೆನ್ನಾಗಿ ಸಲಹುತ್ತಾನೆ.**

ಈ ವಾಕ್ಯಗಳನ್ನೇ ಇವುಗಳಲ್ಲಿರುವ ಪದಗಳ ಸ್ಥಳಗಳನ್ನು ಬದಲಿಸಿ ಕೆಳಗೆ ಬರೆದಂತೆ ಹೇಳಿದರೆ ಅರ್ಥವಾಗುವದಿಲ್ಲ.

೧. ಆಟವನ್ನು ಹುಡುಗರು ಚೆಂಡಿನ ಆಡುತ್ತಾರೆ.

೨. ಚೆನ್ನಾಗಿ ಅರಸನು ಉತ್ತಮನಾದ ಸಲಹುವನು ಪ್ರಜೆಗಳನ್ನು. ಇಂತಹ ಪದಗಳ ಗುಂಪು ವಾಕ್ಯವೆನಿಸುವದಿಲ್ಲ. ಮೇಲೆ ಬರೆದಂತೆ ಪದಗಳನ್ನು ಸಾಲುಗೊಳಿಸಿದರೆ ವಾಕ್ಯವೆನಿಸುವವು.

**ವಾಕ್ಯದ ವಿಷಯವಾಗಿ ಈ ವರೆಗೆ ತಿಳಿದುಕೊಂಡ ಸಂಗತಿಗಳು:—**

**೧. ವಾಕ್ಯವೆಂದರೆ ನಾವು ಆಡುವ ಒಂದೊಂದು ಪೂರ್ಣವಾದ ಮಾತು.**

**೨. ವಾಕ್ಯವು ಹಲವು ಪದಗಳ ಗುಂಪು ಆಗಿರುವದು.**

**೩. ವಾಕ್ಯವೆನಿಸಬೇಕಾದರೆ ಅರ್ಥವು (ವಿಚಾರವು) ಪೂರ್ಣವಾಗಿರಬೇಕು. ಎಂದರೆ ಮಾತು ಮುಗಿದಿರಬೇಕು.**

**೪. ವಾಕ್ಯದಲ್ಲಿ ಪದಗಳು ಅರ್ಥವಾಗುವಂತೆ ಸಾಲುಗೊಂಡಿರಬೇಕು.**

**ವಾಕ್ಯ :—ಒಂದು ಪೂರ್ಣವಿಚಾರವನ್ನು ತಿಳಿಸುವಂತೆ ಸಾಲುಗೊಳಿಸಿದ ಪದಗಳ ಗುಂಪು ವಾಕ್ಯವೆನಿಸುವದು.**

# ೪. ನಾಮಪದಗಳ ಭೇದಗಳು

## ೧. ರೂಢನಾಮ.

ನಾಮ ಎಂದರೆ ಹೆಸರು ಎಂಬದನ್ನು ಬಲ್ಲಿರಿ. ಹಲವು ನಾಮಗಳನ್ನು ನೀವು ಹೇಳಬಹುದು:- ಆಕಳು, ಎತ್ತು, ಕುದುರೆ ಮುಂತಾದವು ಪಶುಗಳ ಹೆಸರುಗಳು: ಎಂದರೆ ನಾಮಗಳು. **ಕೊಡ**, **ಕೊಳಗ** ಮುಂತಾದವು ಪಾತ್ರೆಗಳ ಹೆಸರುಗಳು; ಎಂದರೆ ನಾಮಗಳು. ಬೇವು, ಜಾಲಿ, ಹುಣಿಸೆ ಮುಂತಾದವು ಗಿಡಗಳ ಹೆಸರುಗಳು; ಎಂದರೆ ಗಿಡಗಳ ನಾಮಗಳು.

ಆಕಳು ಎಂಬುದು ಒಂದು ತರದ ಪಶುವಿನ ಹೆಸರು; ಆಕಳು ಒಂದೇ ಇರುವದಿಲ್ಲ; ಎಲ್ಲ ಆಕಳುಗಳಿಗೂ ಆಕಳು ಎಂಬ ಹೆಸರು; ಆಕಳ **ಜಾತಿ**ಯೊಳಗಿನ ಎಲ್ಲ ಪಶುಗಳನ್ನೂ ಆಕಳು, ಆಕಳು ಎಂದು ಕರೆಯುವೆವು. **ಆಕಳು** ಈ ನಾಮವು ಆಕಳ **ಜಾತಿಯನ್ನು ಹೇಳುವದು.** ಇದೇ ಮೇರೆಗೆ **ಕೊಡ** ಎಂಬದು ಒಂದು ತರದ ಪಾತ್ರೆಯ ಹೆಸರು. ಕೊಡವು ಒಂದೇ ಇರುವದಿಲ್ಲ. ಎಲ್ಲ ಕೊಡಗಳಿಗೂ ಕೊಡ ಎಂಬ ಹೆಸರು. ಕೊಡ ಈ ನಾಮವು **ಕೊಡದ** ಜಾತಿಯನ್ನು ಹೇಳುವದು.

ಆಕಳು, ಕೊಡ, ಹಣ್ಣು, ಗಿಡ, ಕಲ್ಲು, ಪುಸ್ತಕ ಈ ಬಗೆಯ ನಾಮಗಳು **ಮೊದಲಿನಿಂದಲೂ ಬಳಕೆಯಲ್ಲಿ ಇರುವವು.** ಈ ತರದ ನಾಮಗಳಿಗೆ **ರೂಢನಾಮ** ಎಂಬ ಹೆಸರು.

[ ರೂಢ=ಮೊದಲಿನಿಂದಲೂ ಬಳಕೆಯಲ್ಲಿ ಬಂದ. ]

## ೨. ಅಂಕಿತನಾಮ.

**ಚೆನ್ನ** ಎಂಬದು ಒಬ್ಬ ಮನುಷ್ಯನಿಗೆ ಇಟ್ಟ ಹೆಸರು. **ಚಿಕ್ಕೋಡಿ** ಎಂಬದು ಒಂದು ಊರಿಗೆ ಇಟ್ಟ ಹೆಸರು. **ಕಾವೇರಿ** ಎಂಬದು ಒಂದು ಹೊಳೆಗೆ ಇಟ್ಟ ಹೆಸರು.

**ಚೆನ್ನ, ಚಿಕ್ಕೋಡಿ, ಕಾವೇರಿ** ಈ ತರದ ಇಟ್ಟ ಹೆಸರುಗಳಿಗೆ **ಅಂಕಿತನಾಮ** ಎಂಬ ಹೆಸರು. [ಅಂಕಿತ=ಗುರುತಿಗಾಗಿ ಇಟ್ಟ]

[ ರೂಢನಾಮ, ಅಂಕಿತನಾಮಗಳ ತುಲನೆ. ]

ಮನುಷ್ಯ—ರೂಢನಾಮ; ಒಬ್ಬನ ಹೆಸರಾದ ಚೆನ್ನ—ಅಂಕಿತನಾಮ.
ಊರು—ರೂಢನಾಮ; ಒಂದರ ಹೆಸರಾದ ಚಿಕ್ಕೋಡಿ—ಅಂಕಿತನಾಮ.
ಹೊಳೆ—ರೂಢನಾಮ; ಒಂದರ ಹೆಸರಾದ ಕಾವೇರಿ—ಅಂಕಿತನಾಮ.
ರೂಢನಾಮವು ಹಲವುಗಳ ಹೆಸರು. ಅಂಕಿತನಾಮವು ಒಂದೊಂದರ ಹೆಸರು.

## ೩ ಅನ್ವರ್ಥಕನಾಮ.

| | |
|---|---|
| ೧. **ಚಿತ್ರಗಾರನು ಚಿತ್ರಗಳನ್ನು ಬರೆಯುವನು.** | ಚಿತ್ರ ಬರೆಯುವ ಉದ್ಯೋಗ ಮಾಡುವವನಿಗೆ ಚಿತ್ರಗಾರ ಎಂಬ ಹೆಸರು. |
| ೨. **ಗಾಣಿಗನು ಗಾಣದ ಉದ್ಯೋಗದಲ್ಲಿರುವನು.** | ಗಾಣದ ಉದ್ಯೋಗ ಮಾಡುವವನಿಗೆ ಗಾಣಿಗ ಎಂಬ ಹೆಸರು. |
| ೧. **ಮೋಸಗಾರನು ಜನರನ್ನು ವಂಚಿಸುವನು.** | ಮೋಸ ಎಂಬ ಗುಣವುಳ್ಳವನಿಗೆ ಮೋಸಗಾರ ಎಂಬ ಹೆಸರು. |
| ೨. **ಸುಖಿಯು ಯಾವಾಗಲೂ ಸುಖಬಡುವನು.** | ಸುಖ ಎಂಬ ಗುಣವುಳ್ಳವನಿಗೆ ಸುಖಿ ಎಂಬ ಹೆಸರು. |

ಚಿತ್ರಗಾರ, ಗಾಣಿಗ ಮುಂತಾದವು **ಉದ್ಯೋಗದಿಂದ ಬಂದ** ಹೆಸರುಗಳು. ಮೋಸಗಾರ, ಸುಖಿ ಮುಂತಾದವು **ಗುಣದಿಂದ ಬಂದ** ಹೆಸರುಗಳು.

ಉದ್ಯೋಗ, ಗುಣ ಇವುಗಳಿಂದ ಬಂದ ಹೆಸರುಗಳಿಗೆ **ಅನ್ವರ್ಥಕನಾಮ** ಎಂಬ ಹೆಸರು.

ನಾಮಗಳಲ್ಲಿ **ರೂಢನಾಮ, ಅಂಕಿತನಾಮ, ಅನ್ವರ್ಥಕನಾಮ** ಎಂಬ ಮೂರು ಭೇದಗಳು.

### ಅಭ್ಯಾಸವೂ ಪ್ರಶ್ನಗಳೂ

(೧) ಮುಂದಿನ ವಾಕ್ಯಗಳಲ್ಲಿ ರೂಢ, ಅಂಕಿತ, ಅನ್ವರ್ಥಕನಾಮಗಳನ್ನು ಹೇಳಿರಿ.

ಕೊಂಕಣದಲ್ಲಿ ಬತ್ತವು ಬೆಳೆಯುವದು. ಸಾವಿತ್ರಿಯು ಬಳೆಗಾರನಿಂದ ಕೈಯಲ್ಲಿ ಬಳೆಗಳನ್ನು ಇಡಿಸಿಕೊಂಡಳು. ಕಬ್ಬಿಣದಿಂದ ಮಾಡಿದ

ಕೊಡಲಿ ಕುಡುಗೋಲುಗಳನ್ನು ಮನೆಯಲ್ಲಿ ಉಪಯೋಗಿಸುವರು. ಹೂಗಾರರು ಹೂವುಗಳ ಮಾಲೆಯನ್ನು ಕಟ್ಟಿ ಅಂಗಡಿಯಲ್ಲಿ ಮಾರುವರು. ನೆಯಾರರು (ನೆಯ್ಯುವ ಉದ್ಯೋಗ ಮಾಡುವವರು) ಸೀರೆಗಳನ್ನು ನೆಯ್ಯುವರು. ಹಣ್ಣುಗಳನ್ನು ಗಿಳಿ ಮೊದಲಾದ ಹಕ್ಕಿಗಳು ತಿನ್ನುವವು.

(೨) ಮುಂದೆ ಹೇಳಿದಂತೆ ಒಂದೊಂದು ವಾಕ್ಯವನ್ನು ರಚಿಸಿರಿ. ಒಂದು ರೂಢನಾಮವು ಬರುವಂತೆ; ಒಂದು ಅಂಕಿತನಾಮವೂ ಒಂದು ರೂಢನಾಮವೂ ಬರುವಂತೆ; ಎರಡು ರೂಢನಾಮಗಳೂ ಒಂದು ಅಂಕಿತನಾಮವೂ ಬರುವಂತೆ; ಒಂದು ಅನ್ವರ್ಥಕನಾಮವು ಬರುವಂತೆ.

(೪) ಕೆಳಗಿನ ವಾಕ್ಯಗಳಲ್ಲಿ ರೂಢನಾಮಕ್ಕೆ ಪ್ರತಿಯಾಗಿ ಅಂಕಿತನಾಮವನ್ನೂ, ಅಂಕಿತನಾಮಕ್ಕೆ ಪ್ರತಿಯಾಗಿ ರೂಢನಾಮವನ್ನೂ ಹಾಕಿರಿ.

ಸಾವಿತ್ರಿ ಹಾಡುತ್ತಾಳೆ. ಹುಡುಗನು ಓದುವನು. ಕಾವೇರಿಯಿಂದ ಮೈಸೂರಿಗೆ ಹಿತವಾಗಿದೆ. ಪರ್ವತದ ಮೇಲೆ ಮನುಷ್ಯನು ಇರಬಹುದು.

(೪) ರೂಢನಾಮ ಅಂಕಿತನಾಮಗಳಲ್ಲಿ ಹೆಚ್ಚುಕಡಿಮೆ ಏನು? ನಾಮಗಳ ಭೇದಗಳು ಯಾವವು? ಮತ್ತು ಎಷ್ಟು?

## ೫. ವಿಶೇಷಣ ಭೇದಗಳು

**ಕರಿಯ ಕಲ್ಲು; ಚತುರ ಮನುಷ್ಯನು; ಜಾಣ ಹುಡುಗಿ.**

ಕರಿಯ, ಚತುರ, ಜಾಣ ಎಂಬವು ವಿಶೇಷಣಗಳೆಂಬವನ್ನು ಬಲ್ಲಿರಿ. ಕರಿಯ ಎಂದರೆ ಕರಿಯತನವುಳ್ಳದ್ದು. ಕರಿಯತನವು ಎಂದರೆ ಕರಿಯ ಬಣ್ಣವು ಕಲ್ಲಿನ ಒಂದು ಗುಣವು. ಚತುರ ಎಂದರೆ ಚತುರತನವುಳ್ಳವ. ಚತುರತನವು ಮನುಷ್ಯನ ಒಂದು ಗುಣವು. ಇದೇ ಮೇರೆಗೆ ಜಾಣತನವು ಹುಡುಗಿಯ ಒಂದು ಗುಣವು.

ಕರಿಯ, ಬಿಳಿಯ, ಚತುರ, ಸುಂದರ, ಚೆಲುವ, ನಿಡಿಯ, ಒಳ್ಳೆಯ ಮುಂತಾದ ವಿಶೇಷಣಗಳು ವಸ್ತುಗಳ ಇಲ್ಲವೆ ಪ್ರಾಣಿಗಳ ಗುಣವನ್ನು ಹೇಳುವವು. ಎಂದರೆ ಗುಣದಿಂದ ವಸ್ತುಗಳನ್ನು ಇಲ್ಲವೆ ಪ್ರಾಣಿಗಳನ್ನು ವರ್ಣಿಸುವವು ಈ ತರದ ವಿಶೇಷಣಗಳಿಗೆ **ಗುಣವಾಚಕ ವಿಶೇಷಣ** ಎಂಬ ಹೆಸರು (ಗುಣವಾಚಕ = ಗುಣವನ್ನು ಹೇಳುವ.)

**ಒಂದು ಮನೆ. ಐದು ಬೆರಳುಗಳು ಇಬ್ಬರು ಹುಡುಗರು**

ಒಂದು, ಐದು, ಇಬ್ಬರು ಇವು ವಿಶೇಷಣಗಳೆಂಬದನ್ನು ಬಲ್ಲಿರಿ. ಇವು ವಸ್ತುಗಳ ಇಲ್ಲವೆ, ಪ್ರಾಣಿಗಳ **ಸಂಖ್ಯೆ**ಯನ್ನು ಹೇಳುವವು; ಎಂದರೆ ಸಂಖ್ಯೆಯಿಂದ ವಸ್ತುಗಳನ್ನು ಇಲ್ಲವೆ ಪ್ರಾಣಿಗಳನ್ನು ವರ್ಣಿಸುವವು. ಈ ತರದ ವಿಶೇಷಣಗಳಿಗೆ **ಸಂಖ್ಯಾವಾಚಕ ವಿಶೇಷಣ** ಎಂಬ ಹೆಸರು.

[ಸಂಖ್ಯಾವಾಚಕ = ಸಂಖ್ಯೆಯನ್ನು ಹೇಳುವ]

**ದೊಡ್ಡ ಪೆಟ್ಟಿಗೆ; ಸಣ್ಣ ಪೆಟ್ಟಿಗೆ. ಹಿರಿಯ ಮನುಷ್ಯ; ಕಿರಿಯ ಮನುಷ್ಯ. ಚಿಕ್ಕ ಕೂಸು; ಪುಟ್ಟ ಕೂಸು.**

ದೊಡ್ಡ, ಸಣ್ಣ, ಹಿರಿಯ, ಕಿರಿಯ, ಚಿಕ್ಕ, ಪುಟ್ಟ ಇವು ವಿಶೇಷಣಗಳೆಂಬದನ್ನು ಬಲ್ಲಿರಿ; ಇಲ್ಲಿ ದೊಡ್ಡ ಸಣ್ಣ ಎಂಬವು ಪೆಟ್ಟಿಗೆಯ **ಪರಿಮಾಣ**ವನ್ನು ಎಂದರೆ ಗಾತ್ರದ ಅಳತೆಯನ್ನು ಹೇಳುವವು. ಹಿರಿಯ ಕಿರಿಯ ಇವು ಮನುಷ್ಯನ ಪರಿಮಾಣವನ್ನು ಎಂದರೆ ವಯಸ್ಸಿನ ಅಳತೆಯನ್ನು ಹೇಳುವವು. ಇದೇ ಮೇರೆಗೆ ಚಿಕ್ಕ ಪುಟ್ಟ ಎಂಬವು ಕೂಸಿನ ಗಾತ್ರದ ಪರಿಮಾಣವನ್ನು ಹೇಳುವವು.

ದೊಡ್ಡ, ಸಣ್ಣ, ಬಹಳ, ಸ್ವಲ್ಪ, ಅಷ್ಟು, ಇಷ್ಟು ಮೊದಲಾದ ವಿಶೇಷಣಗಳು ವಸ್ತುಗಳ ಇಲ್ಲವೆ ಪ್ರಾಣಿಗಳ ಪರಿಮಾಣವನ್ನು ಹೇಳುವವು; ಎಂದರೆ ಪರಿಮಾಣದಿಂದ ಅವುಗಳನ್ನು ವರ್ಣಿಸುವವು. ಈ ತರದ ವಿಶೇಷಣಗಳಿಗೆ **ಪರಿಮಾಣವಾಚಕ ವಿಶೇಷಣ** ಎಂಬ ಹೆಸರು.

[ಪರಿಮಾಣವಾಚಕ = ಪರಿಮಾಣವನ್ನು ಹೇಳುವ.]

**ಗುಣವಾಚಕ, ಸಂಖ್ಯಾವಾಚಕ, ಪರಿಮಾಣವಾಚಕ** ಎಂದು ವಿಶೇಷಣಗಳಲ್ಲಿ ಮೂರು ಭೇದಗಳು.

## ಅಭ್ಯಾಸವೂ ಪ್ರಶ್ನಗಳೂ

(ಅ) ಕೆಳಗಿನ ವಾಕ್ಯಗಳಲ್ಲಿರುವ ವಿಶೇಷಣಗಳು ಯಾವ ಭೇದಕ್ಕೆ ಸೇರುವವು? ಮೂವರು ಹೆಂಗಸರು ಸಣ್ಣ ಹಳ್ಳಿಯಿಂದ ದೊಡ್ಡ ಊರ ಸಂತೆಗೆ ಹೋಗುತ್ತಿದ್ದರು. ಕರಿಯ ಕಲ್ಲಿನ ಆ ಚಿಕ್ಕ ಗುಡಿಯಲ್ಲಿ ಸುಂದರ ಮೂರ್ತಿ ಇರುವದು. ಇಬ್ಬರು ಅಕ್ಕ ತಂಗಿಯರು ಕುರುಡ

ತಿಂಕನಿಗೆ ನಾಲ್ಕು ದುಡ್ಡುಗಳನ್ನು ನೀಡಿದರು. ತುಂಟ ಎತ್ತಿಗೆ ಎಂಟು ವಣ ಭಾರ.

(ಆ) ಕೆಳಗಿನ ವಾಕ್ಯಗಳಲ್ಲಿ ತಕ್ಕ ವಿಶೇಷಣಗಳನ್ನು ಹಾಕಿರಿ:—
....ಮನುಷ್ಯನನ್ನು ಮನ್ನಿಸು ....ಮನುಷ್ಯನನ್ನು ಹತ್ತಿರ ಬರಗೊಡಬೇಡ. ದಕ್ಷಿಣದಲ್ಲಿ ...ಬಣ್ಣದ ಜನರು ಹೆಚ್ಚಿಗೆ ಇರುವರು. ನಿನ್ನೆ.... ಮಳೆ ಸುರಿಯಿತಲ್ಲವೇ? ಅದರಿಂದ....ಲಾಭಗಳಾದವು. ರಾಮಣ್ಣನಿಗೆ....ಗಂಡು,....ಹೆಣ್ಣು ಕೂಡಿ....ಮಕ್ಕಳು.
ಕಂಸದಲ್ಲಿ ತೋರಿಸಿದ ವಿಶೇಷಣಗಳನ್ನು ಹಾಕಿರಿ:—
....ಸಕ್ಕರೆಯನ್ನು ತಿನ್ನಬೇಡ (ಗುಣವಾಚಕ,ಪರಿಮಾಣವಾಚಕ ವಿ.)
....ಕಲ್ಲುಗಳನ್ನು ಇಡು. (ಗುಣವಾಚಕ, ಪರಿಮಾಣವಾಚಕ, ಸಂಖ್ಯಾವಾಚಕ)

(ಇ) ಗುಣವಾಚಕ,ಪರಿಮಾಣವಾಚಕ ವಿಶೇಷಣಗಳು ನಾಮಗಳ ವಿಷಯವಾಗಿ ಯಾವ ಹೆಚ್ಚಿನ ಸಂಗತಿಯನ್ನು ಹೇಳುವವು?

---

## ೬. ಸರ್ವನಾಮಗಳ ಭೇದಗಳು

| | |
|---|---|
| **ನಾನು ಪೂರ್ವದಿಕ್ಕಿನಲ್ಲಿ ಮೂಡುತ್ತೇನೆ.**<br>**ನಾನು ಲೋಕಕ್ಕೆ ಬೆಳಕನ್ನು ಕೊಡುತ್ತೇನೆ.** | ಇಲ್ಲಿ ಮಾತಾಡುವವನು ಸೂರ್ಯನು. |

ಸೂರ್ಯನು ಈ ಹೆಸರಿನ ಸ್ಥಳದಲ್ಲಿ ನಾನು ಈ ಸರ್ವನಾಮವು ಬಂದಿದೆ. ನಾನು ಇದರ ಬಹುವಚನವು ನಾವು. ಮಾತಾಡುವವರ ಹೆಸರಿನ ಸ್ಥಳದಲ್ಲಿ ನಾನು ನಾವು ಈ ಸರ್ವನಾಮುಗಳು ಬರುವವು.

ನಾನು ನಾವು ಇವುಗಳಿಗೆ **ಉತ್ತಮಪುರುಷದ ಸರ್ವನಾಮ** ಎಂಬ ಹೆಸರು.

| | |
|---|---|
| **ನೀನು ರಾತ್ರಿಯಲ್ಲಿ ಬೆಳಕನ್ನು ಕೊಡುವೆ.**<br>**ನೀನು ಲೋಕಕ್ಕೆ ಆಹ್ಲಾದವನ್ನು ಮಾಡುವೆ.** | ಇವು ಚಂದ್ರನನ್ನು ಕುರಿತು ಹೇಳಿದ ಮಾತುಗಳು. ಚಂದ್ರನು |

ಈ ಹೆಸರಿನ ಸ್ಥಳದಲ್ಲಿ ನೀನು ಬಂದಿದೆ. ನೀನು ಇದರ ಬಹುವಚನವು ನೀವು.

ಯಾರನ್ನು ಕುರಿತು (ಉದ್ದೇಶಿಸಿ) ಮಾತಾಡುವರೋ ಅವರ ಹೆಸರಿನ ಸ್ಥಳದಲ್ಲಿ ನೀನು, ನೀವು ಈ ಸರ್ವನಾಮಗಳು ಬರುವವು. ನೀನು ನೀವು ಇವುಗಳಿಗೆ **ಮಧ್ಯಮಪುರುಷದ ಸರ್ವನಾಮ** ಎಂಬ ಹೆಸರು.

**ಚಿಕ್ಕೆ ರಾತ್ರಿಯಲ್ಲಿ ಮಿನುಗುತ್ತದೆ.**
**ಅದು ಬಹಳ ದೂರದಲ್ಲಿ ಇರುತ್ತದೆ.**

ಇಲ್ಲಿ ಅದು ಎಂಬದು ಚಿಕ್ಕೆ (ನಕ್ಷತ್ರ) ಈ ಹೆಸರಿನ ಸ್ಥಳದಲ್ಲಿ ಬಂದಿದೆ ನಾನು, ನಾವು, ನೀನು, ನೀವು ಇವರನ್ನು ಬಿಟ್ಟು ಉಳಿದವರ ಹೆಸರಿನ ಸ್ಥಳದಲ್ಲಿ ಅವನು, ಅವಳು, ಅದು, ಇವನು, ಇವಳು, ಇದು ಮೊದಲಾದ ಸರ್ವನಾಮಗಳನ್ನು ಉಪಯೋಗಿಸುವರು. ಇವುಗಳ ಬಹುವಚನಗಳು—ಅವರು, ಅವು, ಇವರು, ಇವು.

ಅವನು, ಆತನು, ಅವಳು, ಆಕೆ, ಅವರು, ಅದು, ಅವು, ಇವನು, ಈತನು, ಇವಳು, ಈಕೆ, ಇವರು, ಇದು, ಇವು ಎಂಬಿವು **ಪ್ರಥಮಪುರುಷದ ಸರ್ವನಾಮಗಳು.** [ನಾನು, ನಾವು, ನೀನು, ನೀವು ಇವನ್ನು ಬಿಟ್ಟು ಉಳಿದ ಎಲ್ಲ ಸರ್ವನಾಮಗಳೂ,ನಾಮಗಳೂ,ವಿಶೇಷಣಗಳೂ ಪ್ರಥಮಪುರುಷದವು.

ಸರ್ವನಾಮಗಳಲ್ಲಿ **ಉತ್ತಮಪುರುಷದ ಸರ್ವನಾಮ, ಮಧ್ಯಮ ಪುರುಷದ ಸರ್ವನಾಮ, ಪ್ರಥಮಪುರುಷದ ಸರ್ವನಾಮ** ಎಂಬ ಮೂರು ಭೇದಗಳು.

**ಅವನು ರಾಮನು, ಅವಳು ಸೀತೆ, ಅದು ಅಯೋಧ್ಯೆ.**

**ಇವನು ಹುಡುಗನು, ಇವಳು ಹುಡುಗಿ, ಇದು ಕೂಸು.**

ಅವನು ಅವಳು ಅದು, ಇವನು ಇವಳು ಇದು ಈ ಸರ್ವನಾಮಗಳು, ತೋರಿಸುವಾಗ ಉಪಯೋಗವಾಗುವವು. ಇವನ್ನು **ದರ್ಶಕ ಸರ್ವನಾಮ** ಎನ್ನುವರು. (ದರ್ಶಕ = ತೋರಿಸುವ)

**ಯಾವನು ಕೇಳಿದನೋ ಅವನು ಬಂದನು.**

**ಯಾವಳು ದುಡಿಯುವಳೋ ಅವಳು ಸುಖಬಡುವಳು.**

**ಯಾವದು ಓಡುವದೋ ಅದು ಮುಂದಾಗುವದು.**

ಯಾವನು—ಅವನು, ಯಾವಳು—ಅವಳು, ಯಾವದು—ಅದು.

ಇಲ್ಲಿ ಯಾವನು, ಯಾವಳು, ಯಾವದು ಎಂಬಿವು ಅವನು, ಅವಳು, ಅದು ಇವಕ್ಕೆ ಸಂಬಂಧಿಸಿವೆ. ಗೊತ್ತಿದ್ದ ಸಂಗತಿಗಳನ್ನು ಹೀಗೆ ಸಂಬಂಧಿಸಿ ಹೇಳುವಾಗ ಯಾವನು ಮೊದಲಾದವನ್ನು ಉಪಯೋಗಿಸುವರು. ಯಾವನು, ಯಾವಳು, ಯಾರು, ಯಾವದು ಯಾವವು ಎಂಬಿವು **ಸಂಬಂಧಕ ಸರ್ವನಾಮಗಳು**. (ಸಂಬಂಧಕ= ಸಂಬಂಧಗೊಳಿಸುವ)

**ಇಲ್ಲಿ ನಿಂತವನು ಯಾವನು?** ಇಲ್ಲಿ ಬಂದದ್ದು ಯಾವದು? ಯಾವನು ಮೊದಲಾದವನ್ನು ಹೀಗೆ ಪ್ರಶ್ನೆ ಮಾಡುವಾಗಲೂ ಉಪಯೋಗಿಸುವರು. ಈ ಮೇರೆಗೆ ಉಪಯೋಗಿಸಿದಾಗ ಇವು **ಪ್ರಶ್ನಾರ್ಥಕ ಸರ್ವನಾಮಗಳೆನಿಸುವವು**. (ಪ್ರಶ್ನಾರ್ಥಕ = ಪ್ರಶ್ನೆ ಮಾಡುವಾಗ ಉಪಯೋಗಿಸುವ.)

(ಯಾವನು ಮೊದಲಾದವು ಕೆಲವು ಕಡೆ ಸಂಬಂಧಕಗಳಾಗಿ, ಕೆಲವು ಕಡೆ ಪ್ರಶ್ನಾರ್ಥಕಗಳಾಗಿ ಇರುವವು)

೧. ಹುಡುಗನು ಮೊದಲು ತಾನು ಬಂದನು.
೨. ಭೀಮನು ತಾನೇ ಈಗ ಓಡಿದನು.
೩. ಮೂರ್ಖರು ತಾವು ದೊಡ್ಡವರೆಂದು ತಿಳಿಯುವರು.

೧ನೆಯ ವಾಕ್ಯದಲ್ಲಿ ತಾನು ಎಂದರೆ ಹುಡುಗನು; ೨ನೆಯ ವಾಕ್ಯದಲ್ಲಿ ತಾನು ಎಂದರೆ ಭೀಮನು; ೩ನೆಯ ವಾಕ್ಯದಲ್ಲಿ ತಾವು ಎಂದರೆ ಮೂರ್ಖರು. ತಾನು, ತಾವು ಎಂದರೆ ಸ್ವತಃ ಎಂಬ ಅರ್ಥವು; ಈ ಅರ್ಥದಲ್ಲಿ ಆತ್ಮ ಎಂಬ ಶಬ್ದವುಂಟು. ತಾನು ತಾವು ಇವುಗಳಿಗೆ **ಆತ್ಮಾರ್ಥಕ ಸರ್ವನಾಮ** ಎಂಬ ಹೆಸರು.

## ಅಭ್ಯಾಸವೂ ಪ್ರಶ್ನೆಗಳೂ

(ಅ) ಅವನು, ಈಕೆ, ಇವರು, ಯಾವನು ಈ ಸರ್ವನಾಮಗಳಲ್ಲಿ ಒಂದೊಂದನ್ನು ಉಪಯೋಗಿಸಿ ಒಂದೊಂದು ವಾಕ್ಯವನ್ನು ರಚಿಸಿರಿ.

(ಆ) ಅವರು, ಯಾವನು, ನಾನು, ಆಕೆ, ನೀವು, ಇವಳು, ಕಲ್ಲನು, ನಾಗಮ್ಮನು, ತೂರನು, ಹೊಸಬಳು ಇವು ಯಾವ ಯಾವ ಪುರುಷದವು?

(ಇ) ಯಾವನು ಎಂಬದನ್ನು ಸಂಬಂಧಕ ಸರ್ವನಾಮದಂತೆಯೂ, ಯಾವದು ಎಂಬದನ್ನು ಪ್ರಶ್ನಾರ್ಥಕದಂತೆಯೂ ಉಪಯೋಗಿಸಿ ವಾಕ್ಯಗಳನ್ನು ಮಾಡಿರಿ.

(ಈ) ಮುಂದೆ ಕೊಟ್ಟ ದರ್ಶಕ ಸರ್ವನಾಮಗಳಲ್ಲಿ ಯಾವವು ಸಮೀಪ ದಲ್ಲಿರುವವರನ್ನು ತೋರಿಸುವದಕ್ಕೆ ಬರುವವು?

ಅವನು, ಇವಳು, ಇವರು, ಇವು, ಈಕೆ, ಅದು, ಆತನು.

---

## ೭. ಮೂಲಶಬ್ದ, ಮತ್ತು ಧಾತು

ಕಲ್ಲನು ಜಾಣನು, ಕಲ್ಲನನ್ನು ಕರೆ, ಕಲ್ಲನಿಗೆ ಹಣವನ್ನು ಕೊಡು. ಈ ವಾಕ್ಯಗಳಲ್ಲಿರುವ ಕಲ್ಲನು, ಕಲ್ಲನನ್ನು, ಕಲ್ಲನಿಗೆ ಈ ಎಲ್ಲ ಪದಗ ಳಲ್ಲಿ ಕಲ್ಲ ಶಬ್ದವು ಕಾಣಬರುವದು.

ಚೆನ್ನನು—ಮನೆಯಿಂದ ಬರುವನು, ಮನೆಗೆ ಹೋಗುವನು, ಮನೆ ಯಲ್ಲಿ ಇರುವನು. ಈ ವಾಕ್ಯದಲ್ಲಿರುವ ಮನೆಯಿಂದ ಮನೆಗೆ ಮನೆಯಲ್ಲಿ ಈ ಎಲ್ಲ ಪದಗಳಲ್ಲಿ ಮನೆ ಈ ಶಬ್ದವು ಕಾಣಬರುವದು.

ಕಲ್ಲ, ಮನೆ ಈ ಶಬ್ದಗಳ ಮುಂದೆ ಕೆಲವು ಅಕ್ಷರಗಳು ಸೇರಲು ಕಲ್ಲನು, ಮನೆಯಿಂದ ಮೊದಲಾದ ಪದಗಳು ಆಗಿವೆ. [ಕಲ್ಲನು=ಕಲ್ಲ+ನು; ಮನೆ ಯಿಂದ=ಮನೆ+ಯಿಂದ.]

ಕಲ್ಲ, ಮನೆ ಮುಂತಾದವುಗಳಿಗೆ ಮೂಲ ಶಬ್ದ ಎಂಬ ಹೆಸರು.

ರಾಮನು ಬರುತ್ತಾನೆ, ಸೀತೆ ಬರುವಳು; ಲಕ್ಷ್ಮಣನು ಬರಲಿ.

ಈ ವಾಕ್ಯದಲ್ಲಿರುವ ಬರುತ್ತಾನೆ, ಬರುವಳು, ಬರಲಿ ಈ ಎಲ್ಲ ಕ್ರಿಯಾ ಪದಗಳಲ್ಲಿ ಬರು ಈ ಮೂಲವು ಕಾಣಬರುವದು.

ಸಂಗನು ಬರುತ್ತಾನೆ, ಗೆಳತಿ ಓಡುವಳು, ಹುಡುಗನು ಓಡಲಿ.

ಈ ವಾಕ್ಯದಲ್ಲಿರುವ ಓಡುತ್ತಾನೆ, ಓಡುವಳು, ಓಡಲಿ ಈ ಎಲ್ಲ ಕ್ರಿಯಾಪದಗಳಲ್ಲಿ 'ಓಡು' ಮೂಲವು ಕಾಣಬರುವದು.

ಬರು, ಓಡು ಈ ಮೂಲಗಳ ಮುಂದೆ ಕೆಲವು ಅಕ್ಷರಗಳು ಸೇರಲು ಬರುತ್ತಾನೆ, ಓಡುವಳು ಮೊದಲಾದ ಕ್ರಿಯಾಪದಗಳು ಉಂಟಾಗಿವೆ.

[ಬರುತ್ತಾನೆ = ಬರು + ಉತ್ತಾನೆ. ಓಡುವಳು = ಓಡು + ವಳು]
ಬರು ಓಡು ಮುಂತಾದವುಗಳಿಗೆ **ಧಾತು** ಎಂಬ ಹೆಸರು.

ಕೆಳಗಿನ ವಾಕ್ಯಗಳಲ್ಲಿ ಮೂಲಶಬ್ದಗಳನ್ನೂ, ಧಾತುಗಳನ್ನೂ ಕಂಡು ಹಿಡಿಯಿರಿ:—

ದೇವರು ಜಗವನ್ನು ಸಲಹುವನು. ಕೂಸುಗಳು ಹಗಲಿನಲ್ಲಿಯೂ ಮಲಗುತ್ತವೆ. ಉದ್ಯೋಗಿಗಳು ಸುಖವನ್ನು ಹೊಂದುವರು. ಜನರು ಆಡಲಿ. ತಮ್ಮನು ಊರಿಗೆ ಹೋಗುವನು. ಮೊಸಳೆಗಳು ದೊಡ್ಡ ಹೊಳೆಯಲ್ಲಿ ಇರುವವು. ಗುರುವು ಶಿಷ್ಯರ ಹಿತವನ್ನು ನೋಡುವನು.

ಹುಡುಗ, ಮನುಷ್ಯ ಮುಂತಾದ ಮೂಲಶಬ್ದಗಳ ಕೊನೆಯ ಅಕ್ಷರವು ಅ. ಆದದರಿಂದ ಇವು ಅಕಾರಾಂತಗಳು. ಹುಡುಗಿ, ಗೆಳತಿ ಮುಂತಾದ ಮೂಲಶಬ್ದಗಳ ಕೊನೆಯ ಅಕ್ಷರವು ಇ. ಆದದರಿಂದ ಇವು ಇಕಾರಾಂತಗಳು. ಕೂಸು, ಗುರು ಮುಂತಾದ ಮೂಲಶಬ್ದಗಳ ಕೊನೆಯ ಅಕ್ಷರವು ಉ. ಆದದರಿಂದ ಇವು ಉಕಾರಾಂತಗಳು. ತಂದೆ, ಸೊಸೆ ಮುಂತಾದ ಮೂಲಶಬ್ದಗಳ ಕೊನೆಯ ಅಕ್ಷರವು ಎ. ಆದದರಿಂದ ಇವು ಎಕಾರಾಂತಗಳು.

## ೮. ಸಂಧಿ

| | |
|---|---|
| ೧. ಗಂಗೆ ಓಡುತ್ತಿರುವಳು. | ೧. ಇಲ್ಲಿ ಓಡುತ್ತ ಮತ್ತು ಇರುವಳು ಕೂಡಿವೆ. |
| ೨. ಮುಗಿಲಿಗೆ ಕೊನೆಯಿಲ್ಲ. | ೨. ಇಲ್ಲಿ ಕೊನೆ ಮತ್ತು ಇಲ್ಲ ಕೂಡಿವೆ. |
| ೩. ಚಳಿಗಾಲದಿರುಳು ದೊಡ್ಡದು. | ೩. ಇಲ್ಲಿ ಚಳಿ + ಕಾಲದ + ಇರುಳು ಕೂಡಿವೆ. |

ಈ ಉದಾಹರಣಗಳಲ್ಲಿ ಮೊದಲನೆಯ ಶಬ್ದದ ಕೊನೆಯ ಅಕ್ಷರವೂ ಎರಡನೆಯ ಶಬ್ದದ ಮೊದಲನೆಯ ಅಕ್ಷರವೂ ಕೂಡಿಕೊಂಡಿವೆ. ಹೀಗೆ ಅಕ್ಷರಗಳು ಕೂಡುವದಕ್ಕೆ **ಸಂಧಿ** ಎಂಬ ಹೆಸರು.

ಒಬ್ಬರಿಗೆ + ಒಂದು = ಒಬ್ಬರಿಗೊಂದು. ಇಲ್ಲಿ ಸಂಧಿ ಮಾಡಿದಾಗ ಮೊದಲನೆಯ ಶಬ್ದದ ಕೊನೆಯ ಎ ಅಕ್ಷರವು ಇಲ್ಲದಂತಾಗಿದೆ. ಮೊದಲಿದ್ದ ಅಕ್ಷರಗಳು ಹೀಗೆ ಇಲ್ಲದಂತಾಗುವದಕ್ಕೆ **ಲೋಪ** ಎಂಬ ಹೆಸರು.

**ಕೈ + ಎತ್ತಿದನು = ಕೈಯೆತ್ತಿದನು (ಕೈ + ಯ್ + ಎತ್ತಿದನು.)**
ಇಲ್ಲಿ ಸಂಧಿ ಮಾಡಿದಾಗ ನಡುವೆ ಯ್ ಅಕ್ಷರವು ಬಂದಿದೆ. ಹೀಗೆ ಸಂಧಿಯಲ್ಲಿ **ಹೊಸ** ಅಕ್ಷರವು ಬರುವದಕ್ಕೆ ಆಗಮ ಎಂದು ಹೆಸರು.

ಬಲ + **ತೋಳು = ಬಲದೋಳು.** ಇಲ್ಲಿ ಸಂಧಿ ಮಾಡಿದಾಗ **ತೋಳು** ಈ ಶಬ್ದದ ತ್ ಅಕ್ಷರವು ದ್ ಆಗಿದೆ. ಹೀಗೆ ಸಂಧಿಯಲ್ಲಿ ಒಂದು ಅಕ್ಷರದ ಸ್ಥಳದಲ್ಲಿ ಮತ್ತೊಂದು ಅಕ್ಷರವು ಬರುವದಕ್ಕೆ **ಆದೇಶ** ಎಂಬ ಹೆಸರು.

**ಸಂಧಿಯಾಗುವಾಗ ಲೋಪ, ಆಗಮ, ಆದೇಶಗಳು ಆಗುವದುಂಟು.**

ಅಭ್ಯಾಸ

ಕೆಳಗಿನ ಉದಾಹರಣಗಳಲ್ಲಿ ಸಂಧಿಯಾದಲ್ಲಿ ಬಿಡಿಸಿರಿ. ಲೋಪ, ಆಗಮ, ಆದೇಶಗಳಲ್ಲಿ ಯಾವದು ಆಗಿದೆ ಹೇಳಿರಿ.

ಊರಿಂದೂರಿಗೆ, ಕಡಿಮೆಯಾಯಿತು, ರಾಮನಾಜ್ಞೆಯನ್ನು. ಮಳೆಗಾಲ, ಸರಿಯಿಲ್ಲ, ಒಂದಿಷ್ಟು, ಮರದುದಿ, ಕುರುಹುಗಣ್ಣು.

**ರಾಮನ + ಊರು = ರಾಮನೂರು, ಊರಲ್ಲಿ + ಇಲ್ಲ = ಊರಲ್ಲಿಲ್ಲ. ಸುಖವು + ಆಯಿತು = ಸುಖವಾಯಿತು.** ಈ ಉದಾಹರಣೆಗಳಲ್ಲೆಲ್ಲ ಮೊದಲಿನ ಶಬ್ದಗಳ ಕೊನೆಯಲ್ಲಿ ಸ್ವರವಿದೆ. ಎರಡನೆಯ ಶಬ್ದಗಳ ಮೊದಲಿಗೆ ಸ್ವರವಿದೆ. ಸಂಧಿಯಲ್ಲಿ ಮೊದಲನೆಯ ಶಬ್ದದ ಕೊನೆಯ ಸ್ವರವು **ಲೋಪವಾಗಿದೆ. ಇದಕ್ಕೆ ಲೋಪ ಸಂಧಿ** ಎಂಬ ಹೆಸರು.

**ಮಡಿ + ಇದು = ಮಡಿಯಿದು; ತಂದೆ + ಉಂಟು = ತಂದೆಯುಂಟು.**

ಈ ಉದಾಹರಣೆಗಳಲ್ಲಿ **ಯ್** ಆಗಮವಾಗಿದೆ. ಲೋಪಸಂಧಿಯನ್ನು ಮಾಡಿದ್ದರೆ ಮಡಿದು, ತಂದುಂಟು ಹೀಗೆ ಆಗುತ್ತಿದ್ದವು, ಆಗ ಅರ್ಥಕ್ಕೆ ತೊಂದರೆಯಾಗುತ್ತಿತ್ತು.

**ಗುರು + ಇಗೆ = ಗುರುವಿಗೆ; ಮಡು + ಇದು = ಮಡುವಿದು.**

ಈ ಉದಾಹರಣೆಗಳಲ್ಲಿ **ವ್** ಆಗಮವಾಗಿದೆ. ಲೋಪಸಂಧಿಯನ್ನು ಮಾಡಿದ್ದರೆ ಗುರಿಗೆ ಮಡಿದು ಹೀಗೆ ಆಗುತ್ತಿದ್ದವು. ಆಗ ಅರ್ಥಕ್ಕೆ ತೊಂದರೆಯಾಗುತ್ತಿತ್ತು.

ಆದರಿಂದ ಇಂಥ ಉದಾಹರಣಗಳಲ್ಲಿ ಲೋಪವಾಗುವದಿಲ್ಲ; ಆಗಮವಾಗುವದು. ಹೀಗೆ ಸಂಧಿಯಲ್ಲಿ ಕೆಲವು ಕಡೆ ಯ್, ಕೆಲವು ಕಡೆ ವ ಆಗಮವಾಗುವದು. ಇವು **ಆಗಮಸಂಧಿಗಳು.**

ಹೊರ + ಕೆಡಹು=ಹೊರಗೆಡಹು; ಇದಿರು + ಕೊಳ್ಳು=ಇದಿರುಗೊಳ್ಳು, ಇಲ್ಲಿ ಎರಡನೆಯ ಶಬ್ದಗಳ ಮೊದಲಿನ ಕ್ ಅಕ್ಷರವು ಸಂಧಿಯಲ್ಲಿ ಗ್ ಆಗಿದೆ.

ಮೈ + ತೊಗಲು = ಮೈದೊಗಲು; ಬಲ + ತೋಳು = ಬಲದೋಳು; ಇಲ್ಲಿ ಎರಡನೆಯ ಶಬ್ದಗಳ ಮೊದಲಿನ ತ್ ಇದು ಸಂಧಿಯಾದಾಗ ದ್ ಆಗಿದೆ.

ತಲೆ + ಬಾಗು = ತಲೆವಾಗು; ತೆರೆ + ಬಾಯಿ = ತೆರೆವಾಯಿ; ಇಲ್ಲಿ ಎರಡನೆಯ ಶಬ್ದಗಳ ಮೊದಲಿನ ಬ್ ಅಕ್ಷರವು ವ್ ಆಗಿದೆ. ಕೆನೆ+ಪಾಲು= ಕೆನೆವಾಲು; ಉರಿ+ಮನೆ= ಉರಿವನೆ; ಇಲ್ಲಿ ಎರಡನೆಯ ಶಬ್ದಗಳ ಮೊದಲಿನ ಪ್ ಮ್ ಅಕ್ಷರಗಳು ವ್ ಆಗಿವೆ. ಸುಖ+ಪಟ್ಟು = ಸುಖಬಟ್ಟು; ಇಲ್ಲಿ ಪ್ ಅಕ್ಷರವು ಬ್ ಆಗಿದೆ. ಇವು **ಆದೇಶಸಂಧಿಗಳು.**

---

## ಅಭ್ಯಾಸವೂ ಪ್ರಶ್ನಗಳೂ

೧. ಕೆಳಗಿನ ವಾಕ್ಯಗಳಲ್ಲಿ ಸಂಧಿಯಾದವುಗಳನ್ನು ಬಿಡಿಸಿರಿ:—

ಮಕ್ಕಳಿಲ್ಲದ ಮನೆ ಗುರುವಿಲ್ಲದ ಮಠ ಇವು ಶೋಭಿಸುವದಿಲ್ಲ.

ಎಲ್ಲೆಲ್ಲಿ ಹೂಗಳಿರುವವೋ ಅಲ್ಲಲ್ಲಿ ತುಂಬಿಗಳು ಸುಳಿದಾಡುವವು. ದೇವರೆಂಬ ಭಾವನೆ ಬಂದರೆ ಕಾಡುಗಲ್ಲಿಗೂ ಶರಣಾಗುವರು. ಹೆಳವನು ಮರದುದಿಯ ಹಣ್ಣನ್ನಪೇಕ್ಷಿಸುವದು ಸರಿಯಲ್ಲ.

೨. ಮೇಲಿನ ವಾಕ್ಯಗಳಲ್ಲಿ ಬಂದ ಆಗಮ, ಆದೇಶ ಸಂಧಿಗಳಾವವು?

೩. + ಈ ಚಿಹ್ನದಿಂದ ತೋರಿಸಿದಲ್ಲಿ ಸಂಧಿಮಾಡಿರಿ:—

ಹಕ್ಕಿಯು ಗೂಡಿನಲ್ಲಿ + ಇರಲಿಲ್ಲ. ನೀರು + ಇಲ್ಲದ + ಊರಿನಲ್ಲಿ ಬಾಳ್ವೆಮಾಡಿದರೆ ಕಷ್ಟವು + ಆಗುವದು. ಇದರಿಂದ + ಏನು ಆಗುವದು? ಚಳಿ + ಕಾಲದಲ್ಲಿ ಗಿಡಗಳಿಗೆ ಹೂವು + ಆಗುವದು + ಇಲ್ಲ ;

# ನಾಮವಿಭಕ್ತಿಗಳು

ಕರ್ತೃ, ಕರ್ಮ ಎಂದರೇನೆಂಬುದನ್ನು ನೀವು ಬಲ್ಲಿರಿ.

**ಸಾವಿತ್ರಿಯು ನಾಚುತ್ತಾಳೆ; ಮಳೆಯು ಸುರಿಯಿತು;**

ಈ ವಾಕ್ಯಗಳಲ್ಲಿ ಸಾವಿತ್ರಿಯು, ಮಳೆಯು ಈ ನಾಮಪದಗಳು ಕರ್ತೃಗಳು

ಸಾವಿತ್ರಿಯು = ಸಾವಿತ್ರಿ + ಯ್ + ಉ. ಮಳೆಯು=ಮಳೆ+ಯ್+ಉ ಇಲ್ಲಿ ಕೊನೆಯ ಉ ಎಂಬದು ಪ್ರತ್ಯಯವು.

ಕರ್ತೃವಾಗಿರುವ ನಾಮದ ಕೊನೆಯಲ್ಲಿ ಉ ಪ್ರತ್ಯಯವು ಸೇರಿರುವದು. ಇದು **ಪ್ರಥಮಾವಿಭಕ್ತಿ**. ಸಾವಿತ್ರಿಯು, ಮಳೆಯು ಮೊದಲಾದವು **ಪ್ರಥಮಾವಿಭಕ್ತಿಯ ಪದಗಳು**.

೧. ಕಳ್ಳನು ಕತ್ತಿಯನ್ನು ಅಟ್ಟಿದನು. ೨. ಕುರುಬನು ಕಂಬಳಿಯನ್ನು ನೆಯ್ಯುವನು. ಇಲ್ಲಿ ಕತ್ತಿಯನ್ನು ಕಂಬಳಿಯನ್ನು ಇವು ಕರ್ಮಗಳು.

ಕತ್ತಿಯನ್ನು = ಕತ್ತಿ+ಅನ್ನು, ಕಂಬಳಿಯನ್ನು=ಕಂಬಳಿ+ಅನ್ನು. ಅನ್ನು ಇದು ಪ್ರತ್ಯಯವು. ಕರ್ಮವಾದಾಗ ನಾಮದ ಕೊನೆಯಲ್ಲಿ ಅನ್ನು ಸೇರುವದು. ಇದು **ದ್ವಿತೀಯಾವಿಭಕ್ತಿ**.

೧. ಹುಡುಗರು ಲೆಕ್ಕಣಿಕೆಯಿಂದ ಬರೆಯುವರು.

೨. ಸಂಗನು ಕಣ್ಣಿಯಿಂದ ದನವನ್ನು ಕಟ್ಟಿದನು.

೧. ಇಲ್ಲಿ ಲೆಕ್ಕಣಿಕೆಯು ಬರೆಯುವ ಕ್ರಿಯೆಗೆ ಸಾಧನವು; ಎಂದರೆ ಬರೆಯುವದಕ್ಕೆ ಅವಶ್ಯವಾಗಿ ಬೇಕಾಗುವಂಥದು. ಇದೇ ಮೇರೆಗೆ ಕಣ್ಣಿಯು ಕಟ್ಟುವ ಕ್ರಿಯೆಗೆ ಸಾಧನವು. ಕ್ರಿಯೆಯ ಇಂಥ ಸಾಧನಕ್ಕೆ ಕರಣ ಎಂಬ ಹೆಸರು; ಲೆಕ್ಕಣಿಕೆ ಕಣ್ಣಿ ಇವು ಕರಣಗಳು.

ಲೆಕ್ಕಣಿಕೆಯಿಂದ=ಲೆಕ್ಕಣಿಕೆ+ಇಂದ. ಕಣ್ಣಿಯಿಂದ = ಕಣ್ಣಿ + ಇಂದ. ಇಂದ ಇದು ಪ್ರತ್ಯಯವು. ಕರಣವಾದ ನಾಮಗಳ ಕೊನೆಯಲ್ಲಿ ಇಂದ ಪ್ರತ್ಯಯವು ಸೇರುವದು. ಇದು **ತೃತೀಯಾ ವಿಭಕ್ತಿ**.

**ನೀಲಕ್ಕನು ತಂಗಿಗೆ ಸೀರೆಯನ್ನು ಕೊಟ್ಟಳು.** } ಇಲ್ಲಿ ಕೊಡುವ
**ಭೀಮನು ಕುರುಡನಿಗೆ ದುಡ್ಡನ್ನು ನೀಡಿದನು.** } ಕ್ರಿಯೆ ನಡಿದಿದೆ

ನೀಲಕ್ಕನು ಕೊಟ್ಟ ಸೀರೆಯನ್ನು ಹೊಂದಿದವಳು ತಂಗಿ; ಭೀಮನು ಕೊಟ್ಟ (ನೀಡಿದ) ದುಡ್ಡನ್ನು ಹೊಂದಿದವನು ಕುರುಡನು. ಕೊಟ್ಟದ್ದನ್ನು ಹೊಂದು ವವರಿಗೆ ಸಂಪ್ರದಾನ ಎಂಬ ಹೆಸರು. ತಂಗಿ, ಕುರುಡ ಇವು ಸಂಪ್ರದಾನಗಳು.

ತಂಗಿಗೆ = ತಂಗಿ + ಇಗೆ; ಕುರುಡನಿಗೆ = ಕುರುಡ + ನ್ + ಇಗೆ. ಇಗೆ ಇದು ಪ್ರತ್ಯಯವು; ಸಂಪ್ರದಾನವನ್ನು ಹೇಳುವಾಗ ನಾಮಗಳ ಕೊನೆ ಯಲ್ಲಿ ಇಗೆ ಪ್ರತ್ಯಯವು ಸೇರುವದು. ಇದು **ಚತುರ್ಥೀ ವಿಭಕ್ತಿ.**

**ಮರದಿಂದ ಎಲೆಯು ಉದುರಿತು. ರಾಮಯ್ಯನು ಉಡುಪಿಯಿಂದ ಬಂದನು.**

ಇಲ್ಲಿ ಮರದಿಂದ ಉದುರಿತು. ಎಂದರೆ ಮರದಿಂದ ಅಗಲಿತು. ಉಡುಪಿಯಿಂದ ಬಂದನು ಎಂದರೆ (ಉಡುಪಿಯಿಂದ) ಅಗಲಿದನು. ಎಲೆಯ ಅಗಲಿಕೆಯು ಮರದಿಂದ ಆರಂಭ ವಾಯಿತು. ರಾಮಯ್ಯನ ಅಗಲಿಕೆಯು ಉಡುಪಿಯಿಂದ ಆರಂಭವಾಯಿತು. ಅಗಲಿಕೆಯು ಎಲ್ಲಿಂದ ಆರಂಭವಾಗುವದೋ ಅದಕ್ಕೆ **ಅಪಾದಾನ** ಎಂಬ ಹೆಸರು. ಮರ, ಉಡುಪಿ ಇವು ಅಪಾದಾನಗಳು.

ಮರದಿಂದ = ಮರ + ದ್ + ಇಂದ; ಉಡುಪಿಯಿಂದ = ಉಡುಪಿ + ಇಂದ. ಇಂದ ಇದು ಪ್ರತ್ಯಯವು. ಅಪಾದಾನವಾದ ನಾಮಗಳ ಕೊನೆ ಯಲ್ಲಿ ಇಂದ ಪ್ರತ್ಯಯವು ಸೇರುವದು. ಇದು **ಪಂಚಮೀ ವಿಭಕ್ತಿ.**

**ಮಣ್ಣಿನ ಕೊಡವು. ರಾಮನ ಮನೆಯು.** ಇಲ್ಲಿ ಕೊಡವು ಮಣ್ಣಿ ನದು. ಮಣ್ಣಿಗೂ ಕೊಡಕ್ಕೂ ಹೀಗೆ ಸಂಬಂಧವಿರುವದು. ಮನೆಯು ರಾಮ ನದು. ರಾಮನಿಗೂ ಮನೆಗೂ ಹೀಗೆ ಸಂಬಂಧವಿರುವದು.

ಮಣ್ಣಿನ = ಮಣ್ಣು + ಇನ್ + ಅ; ರಾಮನ = ರಾಮ+ನ್+ಅ. ಇಲ್ಲಿ ಅ ಇದು ಪ್ರತ್ಯಯವು. ಸಂಬಂಧವನ್ನು ಹೇಳುವಾಗ ನಾಮಗಳ ಕೊನೆಯಲ್ಲಿ ಅ ಪ್ರತ್ಯಯವು ಸೇರುವದು. ಇದು **ಷಷ್ಠೀವಿಭಕ್ತಿ.**

**ಹುಲಿಗಳು ಅಡವಿಯಲ್ಲಿ ಇರುವವು. ಕೊಡವು ಬಾವಿಯಲ್ಲಿ ಬಿದ್ದಿತು.**

ಇಲ್ಲಿ ಹುಲಿಗಳು ಇರುವ ಸ್ಥಾನವು ಅಡವಿ.

ಕೊಡವು ಬಿದ್ದ ಸ್ಥಾನವು ಬಾವಿ. ಕ್ರಿಯೆಯ ಸ್ಥಾನಕ್ಕೆ ಅಧಿಕರಣ ಎಂಬ ಹೆಸರು. ಅಡವಿ, ಬಾವಿ ಇವು ಅಧಿಕರಣಗಳು.

ಅಡವಿಯಲ್ಲಿ = ಅಡವಿ + ಅಲ್ಲಿ; ಬಾವಿಯಲ್ಲಿ = ಬಾವಿ + ಅಲ್ಲಿ. ಅಲ್ಲಿ ಇದು ಪ್ರತ್ಯಯವು. ಅಧಿಕರಣವಾದ ನಾಮಗಳ ಕೊನೆಯಲ್ಲಿ ಅಲ್ಲಿ ಪ್ರತ್ಯಯವು ಸೇರುವದು. ಇದು **ಸಪ್ತಮೀವಿಭಕ್ತಿ.**

**ಮಗಳೇ ಶಾಲೆಗೆ ಹೋಗು** **ಬಾಲಕರೇ ಏಳಿರಿ.**

ಇಲ್ಲಿ ಮಗಳೇ ಬಾಲಕರೇ ಎಂದು ಅವರನ್ನು ಕರೆದಿದೆ. ಹೀಗೆ ಕರೆಯುವದಕ್ಕೆ **ಸಂಬೋಧನ** ಎಂದು ಹೆಸರು.

ಮಗಳೇ = ಮಗಳು + ಏ. ಬಾಲಕರೇ = ಬಾಲಕ + ಅರ್ + ಏ. ಇಲ್ಲಿ ಏ ಇದು ಪ್ರತ್ಯಯವು. ಸಂಬೋಧನ ಮಾಡುವಾಗ ನಾಮಗಳ ಕೊನೆಯಲ್ಲಿ ಏ ಪ್ರತ್ಯಯವು ಸೇರುವದು. ಇದು **ಸಂಬೋಧನವು.**

ಈ ವರೆಗೆ ಹೇಳಿದ ಎಲ್ಲ ನಾಮವಿಭಕ್ತಿ ಪ್ರತ್ಯಯಗಳು :—

| | | | | |
|---|---|---|---|---|
| ೧. | **ಪ್ರಥಮೆ** | (= ಮೊದಲನೆಯ) | ಪ್ರತ್ಯಯವು— | **ಉ** |
| ೨. | **ದ್ವಿತೀಯೆ** | (= ೨ನೆಯ) | " | **ಅನ್ನು** |
| ೩. | **ತೃತೀಯೆ** | (= ೩ನೆಯ) | " | **ಇಂದ** |
| ೪. | **ಚತುರ್ಥಿ** | (= ೪ನೆಯ) | " | **ಇಗೆ, ಕ್ಕೆ, ಅಕ್ಕೆ** |
| ೫. | **ಪಂಚಮಿ** | (= ೫ನೆಯ) | " | **ಇಂದ** |
| ೬. | **ಷಷ್ಠಿ** | (= ೬ನೆಯ) | " | **ಅ** |
| ೭. | **ಸಪ್ತಮಿ** | (= ೭ನೆಯ) | " | **ಅಲ್ಲಿ** |
| | **ಸಂಬೋಧನ** | | " | **ಏ** |

## ಅಭ್ಯಾಸ

ಕೆಳಗಿನ ವಾಕ್ಯಗಳಲ್ಲಿ ಮೂಲಶಬ್ದಗಳಿದ್ದಲ್ಲಿ ತಕ್ಕ ವಿಭಕ್ತಿಯನ್ನು ಸೇರಿಸಿರಿ.

ಶಾಮ ಪುಸ್ತಕ ಓದುವನು; ಮಂಗ ಹಣ್ಣು ತಿಂದಿತು; ಎಮ್ಮೆ ಹಾಲು ಕರೆಯುವದು; ಮಲ್ಲ ಕಾಲು ನಡೆದನು; ನೀಲಕ್ಕ ಜಂಗಮ ಹಣ

ಕೊಟ್ಟಳು, ಮರ ಹಣ್ಣಿಲೆ ಉದಿರುವವು. ಈ ಪುಸ್ತಕ ಒಳ್ಳೆಯ ಕಥೆ ಉಂಟು. ಅವ ಗೆಳೆತನ ಒಳ್ಳೆಯದಲ್ಲ. ಅವಳು ಇಲ್ಲಿಗೆ ಕರೆ. ರಾಮ ಇಲ್ಲಿ ಬಾ.

---

## ೧೦ ನಾಮಪದಗಳಾಗುವಾಗ ಬರುವ ಆಗಮಗಳು

ತಂದೆಯು = ತಂದೆ + ಯ್ + ಉ; ಗುರುವು = ಗುರು + ವ್ + ಉ. **ಇಲ್ಲಿ ತಂದೆ ಗುರು** ಮೂಲಶಬ್ದಗಳು. **ಉ** ನಾಮವಿಭಕ್ತಿ ಪ್ರತ್ಯಯವು.

ತಂದೆಯು = ತಂದೆ + ಯ್ + ಉ; ಗುರುವು = ಗುರು + ವ್ + ಉ. ಇಲ್ಲಿ **ತಂದೆ ಗುರು** ಮೂಲಶಬ್ದಗಳು. **ಉ** ನಾಮವಿಭಕ್ತಿ ಪ್ರತ್ಯಯವು. ತಂದೆ + ಉ, ಗುರು + ಉ ಇವನ್ನು ಕೂಡಿಸುವಾಗ ನಡುವೆ **ಯ್ ವ್** ಆಗಮಗಳು ಬರುವವೆಂಬದನ್ನು ಬಲ್ಲಿರಿ.

ಹುಡುಗನು = ಹುಡುಗ + ನ್ + ಉ; ಹುಡುಗನನ್ನು=ಹುಡುಗ+ನ್+ ಅನ್ನು. ಇವು ಏಕವಚನದ ರೂಪಗಳು. ಇಲ್ಲಿ ನ್ ಆಗಮವು ಬಂದಿದೆ. ಹುಡುಗರು = ಹುಡುಗ + ಅರ್ + ಉ; ಹುಡುಗರನ್ನು = ಹುಡುಗ+ಅರ್+ ಅನ್ನು. ಇವು ಬಹುವಚನದ ರೂಪಗಳು. ಇಲ್ಲಿ **ಅರ್** ಆಗಮವು ಬಂದಿದೆ.

ಮರವು = ಮರ + ವ್ + ಉ, ಮರಗಳು = ಮರ + ಗಳ್ + ಉ; ಮರದಿಂದ=ಮರ+ದ್ + ಇಂದ. ಇಲ್ಲಿ **ವ್ ಗಳ್ ದ್** ಆಗಮಗಳು. ಬಂದಿವೆ.

ಅಣ್ಣಂದಿರು = ಅಣ್ಣ + ಅಂದಿರ್ + ಉ; ಇಲ್ಲಿ **ಅಂದಿರ್** ಆಗಮವು.

ಮೂಲಶಬ್ದಗಳ ಮುಂದೆ ನಾಮವಿಭಕ್ತಿ ಪ್ರತ್ಯಯಗಳು ಸೇರುವಾಗ ನಡುವೆ **ನ್, ವ್, ದ್, ಅಂದಿರ್** ಮುಂತಾದ ಆಗಮಗಳು ಬರುವವು.

### ಅಭ್ಯಾಸ

ಕೆಳಗಿನ ನಾಮಪದಗಳಲ್ಲಿ ಯಾವ ಆಗಮಗಳು ಬಂದಿವೆ?

ಗುರುವು ಸಾಲೆಯಿಂದ ಬಂದನು. ರಾಮನು ಗುರುವನ್ನು ನಮಿಸಿದನು. ಗೆಳೆಯರು ಊರಿಗೆ ಹೋದರು. ಮಾವಂದಿರ ಹೊಲದಲ್ಲಿ ಗಿಡಗಳು ಬೆಳೆದಿವೆ. ಮಗ್ಗದಿಂದ ನೆಯ್ದ ಬಟ್ಟೆಗಳು ತಾಳುವವು. ಮೂರ್ಖನು ಎಂದರೆ ತಿಳಿಗೇಡಿಯು. ಅನ್ನದಾನಿಯು ತನ್ನ ಕೈಯ ಕೋಲನ್ನು ಜಂಗಮನಿಗೆ ಕೊಟ್ಟನು.

# ೧೧. ಮೂಲಶಬ್ದಗಳ ನಾಮವಿಭಕ್ತಿ ರೂಪಗಳು

| | ಏಕವಚನ | ಬಹುವಚನ |
|---|---|---|
| ಪ್ರಥಮೆ | ಹುಡುಗನು | ಹುಡುಗರು |
| ದ್ವಿತೀಯೆ | ಹುಡುಗನನ್ನು | ಹುಡುಗರನ್ನು |
| ತೃತೀಯೆ | ಹುಡುಗನಿಂದ | ಹುಡುಗರಿಂದ |
| ಚತುರ್ಥಿ | ಹುಡುಗನಿಗೆ | ಹುಡುಗರಿಗೆ |
| ಪಂಚಮಿ | ಹುಡುಗನಿಂದ | ಹುಡುಗರಿಂದ |
| ಷಷ್ಠಿ | ಹುಡುಗನ | ಹುಡುಗರ |
| ಸಪ್ತಮಿ | ಹುಡುಗನಲ್ಲಿ | ಹುಡುಗರಲ್ಲಿ |
| ಸಂಬೋಧನ | ಹುಡುಗನೇ | ಹುಡುಗರೇ |

ಇವು ಹುಡುಗ (ಅಕಾರಾಂತ, ಪುಲ್ಲಿಂಗ) ಶಬ್ದದ ನಾಮವಿಭಕ್ತಿ ರೂಪಗಳು. ಹೀಗೆ ಗೆಳೆಯ, ಅಂಗಡಿಕಾರ, ಕರಿಯ, ಅವ, ಈತ, ಜಾಣ ಶಬ್ದಗಳ ಎಲ್ಲ ರೂಪಗಳನ್ನು ಹೇಳಿರಿ.

| | ಏ. ವ. | ಬ. ವ. | | ಏ. ವ. | ಬ. ವ. |
|---|---|---|---|---|---|
| ಪ್ರ. | ಮರವು | ಮರಗಳು | ತೃ. | ಮರದಿಂದ | ಮರಗಳಿಂದ |
| ದ್ವಿ. | ಮರವನ್ನು | ಮರಗಳನ್ನು | ಚ. | ಮರಕ್ಕೆ | ಮರಗಳಿಗೆ |

ಮರ ಶಬ್ದದ ಮುಂದಿನ ರೂಪಗಳನ್ನು ಹೇಳಿರಿ ಇದೇ ಮೇರೆಗೆ ಕೊಡ, ಹೊಲ, ಚಿತ್ರ, ಗುಡ್ಡ ಶಬ್ದಗಳ ಎಲ್ಲ ರೂಪಗಳನ್ನು ಹೇಳಿರಿ

ಪ್ರ. ಗುಡಿಯು ಗುಡಿಗಳು. ದ್ವಿ. ಗುಡಿಯನ್ನು ಗುಡಿಗಳನ್ನು ಮುಂ. ಇವು ಗುಡಿ ಶಬ್ದದ ರೂಪಗಳು. ಹೀಗೆ ನದಿ, ಗೆಳತಿ ಮುಂತಾದ ಇಕಾರಾಂತ ಶಬ್ದಗಳ, ತಂದೆ, ಮನೆ, ಹೊಳೆ ಮುಂತಾದ ಎಕಾರಾಂತ ಶಬ್ದಗಳ ಕೈ ಮುಂತಾದ ಐಕಾರಾಂತ ಶಬ್ದಗಳ ರೂಪಗಳನ್ನು ಹೇಳಿರಿ.

| | ಏ. ವ. | ಬ. ವ. | | ಏ. ವ. | ಬ. ವ. |
|---|---|---|---|---|---|
| ಪ್ರ. | ಗುರುವು | ಗುರುಗಳು | ಪ. | ಗುರುವಿನಿಂದ | ಗುರುಗಳಿಂದ |
| ದ್ವಿ. | ಗುರುವನ್ನು | ಗುರುಗಳನ್ನು | ಷ. | ಗುರುವಿನ | ಗುರುಗಳ |
| ತೃ. | ಗುರುವಿನಿಂದ | ಗುರುಗಳಿಂದ | ಸ. | ಗುರುವಿನಲ್ಲಿ | ಗುರುಗಳಲ್ಲಿ |
| ಚ. | ಗುರುವಿಗೆ | ಗುರುಗಳಿಗೆ | ಸಂ. | ಗುರುವೇ | ಗುರುಗಳೇ |

ಇವು ಗುರು (ಉಕಾರಾಂತ ಪುಲ್ಲಿಂಗ) ಶಬ್ದದ ರೂಪಗಳು. ಈ ಪ್ರೇರಿಗೆ ಕರು, ಮಾತು, ಕಲ್ಲು ಮುಂತಾದವುಗಳ ರೂಪಗಳನ್ನು ಹೇಳಿರಿ. ಅಣ್ಣಂದಿರು ಅಣ್ಣಂದಿರನ್ನು ಮುಂತಾದವು ಅಣ್ಣ ಶಬ್ದದ ಬಹುವಚನದ ರೂಪಗಳು. ತಕ್ಕ, ಸೊಸೆ, ಮಾವ, ತಮ್ಮ ಮುಂತಾದ ಶಬ್ದಗಳ ರೂಪಗಳನ್ನು ಅಣ್ಣ ಶಬ್ದದಂತೆ ಹೇಳಿರಿ.

ಗುಡಿಯು, ಗುಡಿ ಇವೆರಡೂ ಪ್ರಥಮೆಯ ಏಕವಚನದ ರೂಪಗಳು, ಇದೇ ಮೇರಿಗೆ ಗುರುವು ಗುರು, ಮನೆಯು ಮನೆ, ಕೈಯು ಕೈ (ಪ್ರ. ವಿ)

ಪ್ರಥಮೆಯ ಉ ಪ್ರತ್ಯಯವು ಇ, ಉ, ಎ, ಐಕಾರಾಂತ ಶಬ್ದಗಳ ಮುಂದೆ ಒಮ್ಮೊಮ್ಮೆ ಲೋಪವಾಗುವದು.

| | ಏ. ವ. | ಬ. ವ. | ಏ. ವ. | ಬ. ವ. |
|---|---|---|---|---|
| ಪ್ರ. | ಅವಳು | ಅವರು | ಅದು | ಅವು |
| ದ್ವಿ. | ಅವಳನ್ನು | ಅವರನ್ನು | ಅದನ್ನು | ಅವನ್ನು |
| ತೃ. | ಅವಳಿಂದ | ಅವರಿಂದ | ಅದರಿಂದ | ಅವುಗಳಿಂದ |
| ಚ. | ಅವಳಿಗೆ | ಅವರಿಗೆ ಮುಂ. | ಅದಕ್ಕೆ | ಅವುಗಳಿಗೆ ಮುಂ. |

ಅವಳು ಸರ್ವನಾಮದ ರೂಪಗಳು. ಅದು ಸರ್ವನಾಮದ ರೂಪಗಳು.

ಸರ್ವನಾಮದ ಸಂಬೋಧನ ರೂಪಗಳು ಇಲ್ಲ.

| | | | | |
|---|---|---|---|---|
| ಪ್ರ. | ನಾನು | ನಾವು. | ಯಾವನು | ಯಾರು |
| ದ್ವಿ. | ನನ್ನನ್ನು | ನಮ್ಮನ್ನು | ಯಾವನನ್ನು | ಯಾರನ್ನು |
| ತೃ. | ನನ್ನಿಂದ | ನಮ್ಮಿಂದ | | ಮು. |
| ಚ. | ನನಗೆ | ನಮಗೆ | ಯಾವಳು | ಯಾರು |
| ಪಂ. | ನನ್ನಿಂದ | ನಮ್ಮಿಂದ | ಯಾವಳನ್ನು | ಯಾರನ್ನು |
| ಷ. | ನನ್ನ | ನಮ್ಮ | | ಮು. |
| ಸಂ. | ನನ್ನಲ್ಲಿ | ನಮ್ಮಲ್ಲಿ | ಯಾವದು | ಯಾವವು ಮು. |

ಉಳಿದ ವಿಭಕ್ತಿಗಳ ರೂಪಗಳನ್ನು ಹೇಳಿರಿ. ನೀನು ತಾನು ಇವುಗಳ ರೂಪಗಳು ನಾನು ಇದರ ರೂಪಗಳಂತೆ ಆಗುವವು.

## ೩. ವಿಧ್ಯರ್ಥಕ ಕ್ರಿಯಾಪದ

೧. ಕಲ್ಲನು ಪುಸ್ತಕವನ್ನು ಓದಲಿ
೨. ನೀವು ಈ ಲೆಕ್ಕವನ್ನು ತಿಳಿಸಿರಿ.

೧. ಓದಲಿ ಎಂದರೆ ಓದಬೇಕು ಎಂಬ ಅಪ್ಪಣೆ ಇಲ್ಲವೆ ಬಿನ್ನಹವು ತೋರುವದು.

(ಬಿನ್ನಹ = ಹೇಳಿಕೊಳ್ಳುವದು.) ೨. ತಿಳಿಸಿರಿ ಎಂದರೆ ತಿಳಿಸಬೇಕು ಎಂಬ ಅಪ್ಪಣೆಯು ಇಲ್ಲವೆ ಬಿನ್ನಹವು ತೋರುವದು. ಅಪ್ಪಣೆ, ಬಿನ್ನಹ ಈ ಅರ್ಥಗಳಲ್ಲಿ ವಿಧಿ ಎಂಬ ಶಬ್ದವುಂಟು. ಓದಲಿ, ತಿಳಿಸಿರಿ ಈ ತರದ ಕ್ರಿಯಾಪದಗಳಿಗೆ ವಿಧ್ಯರ್ಥಕ ಕ್ರಿಯಾಪದ ಎಂಬ ಹೆಸರು.

(ವಿಧ್ಯರ್ಥಕ = ವಿಧಿ + ಅರ್ಥಕ = ಅಪ್ಪಣೆ ಬಿನ್ನಹ ಈ ಅರ್ಥದ.)

| | | | | |
|---|---|---|---|---|
| ಮಾಡಲಿ | ಮಾಡಲಿ | ಪ್ರಥಮ | ಪುರುಷ, | ಮೂರೂ ಲಿಂಗ, |
| ಮಾಡು | ಮಾಡಿರಿ | ಮ. | ಪು. | ,, |
| ಮಾಡುವೆ | ಮಾಡುವ | ಉ. | ಪು. | ,, |

ಇವು ಮಾಡು ಧಾತುವಿನ ವಿಧ್ಯರ್ಥಕ ಕ್ರಿಯಾಪದಗಳು.

---

## ೪. ನಿಷೇಧಾರ್ಥಕ ಕ್ರಿಯಾಪದ

೧. ಶಂಕರನು ಸುಳ್ಳನ್ನು ಹೇಳನು.
೨. ನಾನು ಊರಿಗೆ ಹೋಗೆನು.

೧. ಹೇಳನು ಎಂದರೆ ಹೇಳುವದಿಲ್ಲ, ಹೇಳುವ ಕ್ರಿಯೆ ನಡೆಯುವದಿಲ್ಲ ಎಂಬ ಅರ್ಥವು.

೨. ಹೋಗೆನು ಎಂದರೆ ಹೋಗುವ ಕ್ರಿಯೆ ನಡೆಯುವದಿಲ್ಲ ಎಂಬ ಅರ್ಥವು ಕ್ರಿಯೆ ನಡೆಯುವದಿಲ್ಲ ಈ ಅರ್ಥದಲ್ಲಿ **ನಿಷೇಧ** ಎಂಬ ಶಬ್ದವುಂಟು. ಹೇಳನು, ಹೋಗೆನು ಈ ತರದ ಕ್ರಿಯಾಪದಗಳಿಗೆ **ನಿಷೇಧಾರ್ಥಕ** ಕ್ರಿಯಾಪದ ಎಂಬ ಹೆಸರು.

| | | |
|---|---|---|
| ಪ್ರ. ಪು. | ಮಾಡನು ಮಾಡರು. | |
| | ಮಾಡಳು ಮಾಡರು. | ಮ. ಪು. ಮಾಡೆ ಮಾಡಿರಿ. |
| | ಮಾಡದು ಮಾಡವು. | ಉ. ಪು. ಮಾಡೆನು ಮಾಡೆವು. |

ಈ ಮೇರೆಗೆ ಕ್ರಿಯಾಪದಗಳಲ್ಲಿ **ಕಾಲಾರ್ಥಕ, ಸಂಭಾವನಾರ್ಥಕ, ವಿಧ್ಯರ್ಥಕ, ನಿಷೇಧಾರ್ಥಕ** ಎಂದು ನಾಲ್ಕು ಭೇದಗಳುಂಟು.

ಅಭ್ಯಾಸವೂ ಪ್ರಶ್ನಗಳೂ

೧. ಕೆಳಗಿನ ವಾಕ್ಯಗಳಲ್ಲಿ ಬಂದ ಕ್ರಿಯಾಪದಗಳು ಯಾವ ಅರ್ಥದವು?

ಜನರು ಸತ್ಯಮಾರ್ಗದಲ್ಲಿ ನಡೆಯಲಿ. ಕಲ್ಲನು ಊರಿಗೆ ಹೋದಾನು. ಸಜ್ಜನರು ಸುಳ್ಳನ್ನು ಆಡರು. ನೀನು ವ್ಯಾಕರಣವನ್ನು ಕಲಿ. ನಾಳೆ ಸುದ್ದಿ ಬಂದೀತು. ನಾನು ಮಲಗೆನು. ನಾವು ತೋಟಕ್ಕೆ ಹೋಗುವ.

೨. ಕೆಳಗಿನ ವಾಕ್ಯಗಳಲ್ಲಿದ್ದ ಕಾಲಾರ್ಥಕ ಕ್ರಿಯಾಪದಗಳ ಸ್ಥಳದಲ್ಲಿ ನಿಷೇಧಾರ್ಥಕ ಇಲ್ಲವೆ ವಿಧ್ಯರ್ಥಕ ಕ್ರಿಯಾಪದವನ್ನು ಹಾಕಿರಿ.

ರಾಮನು ಮಲಗುತ್ತಾನೆ. ಇಂದು ಮಳೆ ಆಗುವದು; ಕೆರೆ ತುಂಬುತ್ತದೆ. ರಾಮನು ಹಾಲನ್ನು ಕುಡಿಯುವನು. ಹಕ್ಕಿಯು ಗೂಡಿನಲ್ಲಿ ಮಲಗುತ್ತದೆ.

೩. ಕೆಳಗೆ ಕೊಟ್ಟ ಕ್ರಿಯಾಪದಗಳಿಗೆ ಅರ್ಥ, ಪುರುಷ, ಲಿಂಗ ವಚನ ಎಂಬ ಕ್ರಿಯಾಪದಕ್ಕಿರುವ ೪ ಸಂಗತಿಗಳನ್ನು ಹೇಳಿರಿ. :—

ಓಡಿಯಾನು, ಕರೆಯುವನು, ಮುರಿಯುವರು, ಕಲಿ, ಹಿಡಿದೆವು, ಮಲಗೆವು, ಸರಿಯಲಿ, ಓದುವೆವು, ನಡೆಯುತೀ, ನುಡಿದೆ.

---

## ೧೪. ಅವ್ಯಯಗಳ ಭೇದಗಳು.

ನಾಮ, ಸರ್ವನಾಮ, ಮೊದಲಾದವು, ಲಿಂಗ-ವಚನ-ವಿಭಕ್ತಿಗಳು ಬೇರೆ ಬೇರೆ ಇದ್ದಂತೆ ಬೇರೆ ಬೇರೆ ರೂಪಗಳನ್ನು ಹೊಂದುವವೆಂಬದನ್ನೂ ಅವ್ಯಯಗಳು ಒಂದೇ ರೂಪದಲ್ಲಿ ಇರುವವೆಂಬುದನ್ನೂ ಬಲ್ಲಿರಿ. ಕೆಳಗಿನ ವಾಕ್ಯಗಳಲ್ಲಿರುವ ಅವ್ಯಯಗಳನ್ನು **ನೋಡಿರಿ.**

೧. ಮಲ್ಲನು ಸುಮ್ಮನೆ ನಿಂತನು.
೨. ಸಂಗನು ತಟ್ಟನೆ ಎದ್ದನು.
೩. ಬಳಿಕ ನಾಗು ಮಾತಾಡಿದಳು
೪. ಪೂರವರು ಪಿಸಿಪಿಸಿ ನಕ್ಕರು

ಇಲ್ಲಿ ಸುಮ್ಮನೆ ತಟ್ಟನೆ ಬಳಿಕ, ಪಿಸಿಪಿಸಿ ಇವು ಅವ್ಯಯಗಳು. ೧. ಸುಮ್ಮನೆ ಇದು ಹೇಗೆ ನಿಂತನು ಎಂಬದನ್ನು ಹೇಳುವದು.

ಎಂದರೆ ನಿಲ್ಲುವ ರೀತಿಯನ್ನು ಹೇಳಿ (ನಿಲ್ಲುವ) ಕ್ರಿಯೆಯನ್ನು ವರ್ಣಿಸುವದು. ೨. ಇದೇ ಮೇರೆಗೆ ತಟ್ಟನೆ ಎಂಬುದು ಏಳುವ ಕ್ರಿಯೆಯನ್ನು ವರ್ಣಿಸುವದು. ೩. ಬಳಿಕ ಇದು ಯಾವಾಗ ಮಾತಾಡಿದಳು ಎಂಬದನ್ನು ಹೇಳುವದು; ಎಂದರೆ ಕಾಲದಿಂದ ಕ್ರಿಯೆಯನ್ನು ವರ್ಣಿಸುವದು. ೪. ಪಿಸಿಪಿಸಿ ಇದು ಹೇಗೆ ನಕ್ಕರು ಎಂಬುದನ್ನು ಹೇಳುವದು; ಎಂದರೆ ನಗುವ ಅನುಕರಣ ಮಾಡಿ (ನಗುವ) ಕ್ರಿಯೆಯನ್ನು ವರ್ಣಿಸುವದು.

ಹೇಗೆ ನಿಂತನು ?—ಸುಮ್ಮನೆ. ಹೇಗೆ ಎದ್ದನು ?—ತಟ್ಟನೆ.

ಯಾವಾಗ ಮಾತಾಡಿದಳು ?—ಬಳಿಕ. ಹೇಗೆ ನಕ್ಕರು ?—ಪಿಸಿಪಿಸಿ.

ಈ ಅವ್ಯಯಗಳು ಕ್ರಿಯೆಯನ್ನು ವರ್ಣಿಸುವವು; ಎಂದರೆ ಕ್ರಿಯೆಯ ವಿಷಯವಾಗಿ ಹೆಚ್ಚಿನ ಸಂಗತಿಗಳನ್ನು ತಿಳಿಸುವವು. ಈ ತರವ ಅವ್ಯಯಗಳಿಗೆ **ಕ್ರಿಯಾವಿಶೇಷಣಾವ್ಯಯ** ಎಂಬ ಹೆಸರು.

೧. ರಾಮನು ಬಂದನು. ೨. **ಮತ್ತು** ಮಾತಾಡಿದನು.

೧. ಸಂಗನು ಬರುವನು; ೨ ಇಲ್ಲವೆ ಕಲ್ಲನು ಬರುವನು.

ಇಲ್ಲಿ **ಮತ್ತು** ಇಲ್ಲವೆ ಇವು ಅವ್ಯಯಗಳು. ಇವು ೧ನೆಯ ೨ನೆಯ ವಾಕ್ಯಗಳನ್ನು ಕೂಡಿಸಿ ಸಂಬಂಧಗೊಳಿಸುವವು.

೧. ರಾಮನು ಮತ್ತು ಭೀಮನು ಮಾತಾಡಿದರು.

೨. ಸಂಗನು **ಇಲ್ಲವೆ** ಕಲ್ಲನು ಹೋಗುವನು.

ಮತ್ತು ಇದು ರಾಮನು, ಭೀಮನು ಈ ಪದಗಳನ್ನು ಕೂಡಿಸಿ ಸಂಬಂಧಗೊಳಿಸುವದು. ಇಲ್ಲವೆ ಇದು ಸಂಗನು ಕಲ್ಲನು ಈ ಪದಗಳನ್ನು ಸಂಬಂಧಗೊಳಿಸುವದು.

ಹೀಗೆ ವಾಕ್ಯಗಳನ್ನಾಗಲಿ ಪದಗಳನ್ನಾಗಲಿ ಕೂಡಿಸಿ ಸಂಬಂಧಗೊಳಿಸುವ ಅವ್ಯಯಗಳಿಗೆ **ಸಂಬಂಧಕಾವ್ಯಯ** ಎಂಬ ಹೆಸರು.
(ಸಂಬಂಧಕ=ಸಂಬಂಧಗೊಳಿಸುವ)

**ಎಲೋ ಚೆನ್ನಾ** ಇತ್ತ ಬಾ.
ಎಲೈ ಹುಡುಗರೇ ಏಳಿರಿ.

**ಎಲೋ ಎಲೈ**, ಈ ಅವ್ಯಯಗಳನ್ನು ಸಂಬೋಧಿಸುವಾಗ ಎಂದರೆ ಕರೆಯುವಾಗ ಉಪಯೋಗಿಸುವರು.

ಈ ತರದ ಅವ್ಯಯಗಳಿಗೆ **ಸಂಬೋಧಕಾವ್ಯಯ** ಎಂಬ ಹೆಸರು.

೧. ಅಹಹ ಈ ನಸುಗಾಳಿ ಎಷ್ಟು ಸೊಗಸಾಗಿದೆ!
೨. ಅಯ್ಯೋ ಅವನು ಹಾಳಾದನು!
೩. ಅಹಾ ಬಾಲಕನು ನಾಲ್ಕು ಮಣ ಭಾರವನ್ನು ಎತ್ತಿದನು!

**ಅಹಹ, ಅಯ್ಯೋ**, ಅಹಾ ಇವು ಅವ್ಯಯಗಳು. ೧. ಅಹಹ ಎಂಬುದು ಇಲ್ಲಿ ಆನಂದವನ್ನು ಸೂಚಿಸುವದು.

೨. ಅಯ್ಯೋ ಎಂಬದು ದುಃಖವನ್ನು ಸೂಚಿಸುವದು. ೩. ಅಹಾ ಎಂಬದು ಆಶ್ಚರ್ಯವನ್ನು ಸೂಚಿಸುವದು. ಈ ತರದ ಅವ್ಯಯಗಳು ಆನಂದ, ದುಃಖ, ಆಶ್ಚರ್ಯ ಮುಂತಾದ ಮನೋಭಾವಗಳನ್ನು ಸೂಚಿಸುವವು. ಇಂಥ ಅವ್ಯಯಗಳಿಗೆ **ಭಾವಬೋಧಕಾವ್ಯಯ** ಎಂಬ ಹೆಸರು. [ಭಾವಬೋಧಕ=ಮನೋಭಾವಗಳನ್ನು ಸೂಚಿಸುವ]

ಕಲ್ಲನು ಹೋದನೇ? (ಹೋದನು+ಏ)
ಭೀಮನು ಬರುವನೋ? (ಬರುವನು+ಓ)
ಸಂಗನು ಮಲಗಿಹನೇನು? (ಮಲಗಿದನು+ಏನು)

ಇಲ್ಲಿ **ಎ, ಓ, ಏನು** ಇವು ಅವ್ಯಯಗಳು. ಪ್ರಶ್ನೆ ಕೇಳುವಾಗ ಬರುವವು. ಈ ತರದ ಅವ್ಯಯಗಳಿಗೆ **ಪ್ರಶ್ನಾರ್ಥಕಾವ್ಯಯ** ಎಂಬ ಹೆಸರು.

ಅವ್ಯಯಗಳಲ್ಲಿ **೧. ಕ್ರಿಯಾವಿಶೇಷಣಾವ್ಯಯ, ೨. ಸಂಬಂಧಕಾವ್ಯಯ, ೧. ಸಂಬೋಧಕಾವ್ಯಯ, ೪. ಭಾವಬೋಧಕಾವ್ಯಯ, ೫. ಪ್ರಶ್ನಾರ್ಥಕಾವ್ಯಯ** ಎಂಬ ೫ ಭೇದಗಳುಂಟು.

## ಅಭ್ಯಾಸ

ಕೆಳಗಿನ ವಾಕ್ಯಗಳಲ್ಲಿರುವ ಅವ್ಯಯಗಳು ಎಂಥ ಅವ್ಯಯಗಳು?

ಓಹೋ ಈ ನಾಯಿಯು ಎಷ್ಟು ಚುರುಕಾಗಿದೆ! ನನ್ನ ಮತ್ತು ನಿನ್ನ ಸ್ನೇಹಕ್ಕೆ ಭಂಗವು ಬರಬಾರದು. ಎಲೋ ನೀಚಾ, ಹೀಗೆ ಮಾತಾಡಬೇಡ.

ಅಕಟಾ! 'ನಿಮ್ಮ ಗತಿ ಹೀಗಾಯಿತೇ! ಆಹಾ! ನಿಮ್ಮ ಮಗನು ತಟ್ಟನೆ ಲೆಕ್ಕವನ್ನು ಮಾಡುವನು. ನಿನ್ನನ್ನು ಕಂಡರೆ ನನ್ನ ಮೈ ಭಗಭಗ ಉರಿಯುವದು! ಕಲ್ಲನು ಪತ್ರವನ್ನು ಓದಿದನೇ! ಕಲ್ಲನು ಇಲ್ಲವೆ ಸಂಗನು ಅದನ್ನು ಓದಲಿ.

---

## ೧೫. ಧಾತುಗಳಿಂದ ಉಂಟಾಗುವ ವಿಶೇಷಣಗಳು

**ಮಲಗುವ** ಹುಡುಗನು. **ನಾಚುವ** ಹುಡುಗಿ. **ಓಡುವ** ನಾಯಿ. ಎಂಥ ಹುಡುಗನು? ಮಲಗುವ ಹುಡುಗನು; ಮಲಗುವ ಎಂಬದು ಹುಡುಗನನ್ನು ವರ್ಣಿಸುವದು; ಎಂದರೆ ಹುಡುಗನ ವಿಷಯವಾಗಿ ಹೆಚ್ಚಿನ ಸಂಗತಿಯನ್ನು ಹೇಳುವದು. ಆದದರಿಂದ ಮಲಗುವ ಎಂಬದು ಹುಡುಗನು ಇದರ ವಿಶೇಷಣವು; ಮತ್ತು ಓಡುವ ಎಂಬದು ನಾಯಿ ಇದರ ವಿಶೇಷಣವು.

ಮಲಗುವ = ಮಲಗು + ಉವ; ನಾಚುವ = ನಾಚು + ಉವ; *ಓಡುವ = ಓಡು + ಉವ.*

ಇಲ್ಲಿ ಮಲಗು ಇದು ಧಾತು. ಉವ ಇದು ಪ್ರತ್ಯಯವು. ಮಲಗುವ ಇದು ಮಲಗು ಧಾತುವಿನಿಂದ ಉಂಟಾಗಿದೆ. ಇದೇ ಮೇರೆಗೆ ನಾಚುವ, ಓಡುವ ಇವು ನಾಚು, ಓಡು ಈ ಧಾತುಗಳಿಂದ ಉಂಟಾಗಿವೆ. ಹೀಗೆ ಧಾತುಗಳ ಮುಂದೆ ಉವ ಪ್ರತ್ಯಯವು ಸೇರಿದರೆ ಈ ತರದ ರೂಪಗಳಾಗುವವು. ಮಲಗುವ ಎಂದರೆ ಈಗ ಇಲ್ಲವೆ ಇನ್ನು ಮುಂದೆ ಈ ಕಾಲವು ತೋರುವದು; ಎಂದರೆ ವರ್ತಮಾನಕಾಲವು ಇಲ್ಲವೆ ಭವಿಷ್ಯತ್ಕಾಲವು ತೋರುವದು. ಮಲಗುವ, ನಾಚುವ, ಓಡುವ ಮುಂತಾದವು ಧಾತುಗಳ ಮುಂದೆ ಉವ ಪ್ರತ್ಯಯವು ಸೇರಲು ಉಂಟಾದ ವಿಶೇಷಣಗಳು.

**ಮಲಗಿದ** ಹುಡುಗನು; **ನಾಚಿದ** ಹುಡುಗಿ; **ಓಡಿದ** ನಾಯಿ.

ಎಂಥ ಹುಡುಗನು? ಮಲಗಿದ. ಎಂಥ ಹುಡುಗಿ? ನಾಚಿದ.

ಮಲಗಿದ, ನಾಚಿದ, ಓಡಿದ ಇವು ವಿಶೇಷಣಗಳು.

ಮಲಗಿದ = ಮಲಗು + ಇದ; ನಾಚಿದ + ನಾಚು + ಇದ; ಓಡಿದ + ಓಡು + ಇದ ಮಲಗು, ನಾಚು, ಓಡು ಈ ಧಾತುಗಳ ಮುಂದೆ ಇದ ಪ್ರತ್ಯಯವು ಸೇರುವದರಿಂದ ಮಲಗಿದ ಮುಂತಾದ ರೂಪಗಳಾಗಿವೆ. ಮಲಗಿದ ಎಂದರೆ ಈ

ಮೊದಲು ಮಲಗಿದ; ಎಂದರೆ ಭೂತಕಾಲವು ತೋರುವದು. (ನುಡಿದ= ನುಡಿ+ದ; ಪಡೆದ=ಪಡೆ+ದ.) ಕೆಲವು ಧಾತುಗಳ ಮುಂದೆ ಇದ ಪ್ರತ್ಯಯಕ್ಕೆ ಪ್ರತಿಯಾಗಿ ದ ಪ್ರತ್ಯಯವು ಸೇರಲು ಈ ತರದ ರೂಪಗಳಾಗುವವು. ಮಲಗಿದ, ನಾಚಿದ, ಓಡಿದ, ನುಡಿದ ಮುಂತಾದವು ಧಾತುಗಳ ಮುಂದೆ ಇದ ಇಲ್ಲವೆ ದ ಪ್ರತ್ಯಯವು ಸೇರುವದರಿಂದ ಉಂಟಾದ ವಿಶೇಷಣಗಳು.

**ಮಲಗದ** ಹುಡುಗನು; **ನಾಚದ** ಹುಡುಗಿ; **ಓಡದ** ನಾಯಿ.

ಎಂಥ ಹುಡುಗನು? ಮಲಗದ ಹುಡುಗನು. ಮಲಗದ ಎಂಬುದು ಹುಡುಗನು ಎಂಬುದಕ್ಕೆ ವಿಶೇಷಣವು. ನಾಚದ ಓಡದ ಇವೂ ವಿಶೇಷಣಗಳು. ಮಲಗದ=ಮಲಗು+ಅದ; ನಾಚದ=ನಾಚು+ಅದ; ಓಡದ=ಓಡು+ಅದ. ಮಲಗು, ನಾಚು, ಓಡು ಈ ಧಾತುಗಳ ಮುಂದೆ ಅದ ಪ್ರತ್ಯಯವು ಸೇರುವದರಿಂದ ಮಲಗದ ಮುಂತಾದ ರೂಪಗಳಾಗಿವೆ. ಮಲಗದ ಎಂದರೆ ಮಲಗುವ ಕೆಲಸವನ್ನು ಮಾಡದ ಎಂಬ ಅರ್ಥವು; ಎಂದರೆ ನಿಷೇಧವು ತೋರುವದು. ಮಲಗದ, ನಾಚದ, ಓಡದ ಮುಂತಾದವು ಧಾತುಗಳ ಮುಂದೆ ಅದ ಪ್ರತ್ಯಯವು ಸೇರುವದರಿಂದ ಉಂಟಾದ ವಿಶೇಷಣಗಳು.

ನೋಡುವ, ನೋಡಿದ, ನೋಡದ ಇವು ನೋಡು ಧಾತುವಿನಿಂದ ಉಂಟಾದ ವಿಶೇಷಣಗಳು. ಕೇಳುವ ಕೇಳಿದ ಕೇಳದ ಇವು ಕೇಳು ಧಾತುವಿನಿಂದ ಉಂಟಾದ ವಿಶೇಷಣಗಳು. ಈ ಮೇರೆಗೆ ಧಾತುವಿನಿಂದ ಮೂರು ತರದ ವಿಶೇಷಣಗಳುಂಟಾಗುವವು.

## ಅಭ್ಯಾಸ

೧. ಕೆಳಗಿನ ವಾಕ್ಯಗಳಲ್ಲಿ ಬಂದ ಧಾತುಗಳಿಂದುಂಟಾದ ವಿಶೇಷಣಗಳನ್ನು ಹೇಳಿರಿ.

ಮನಸ್ಸಿನಲ್ಲಿ ಮೂಡಿದ ವಿಚಾರವೂ ಬಾಯಿಂದ ಆಡಿದ ಮಾತೂ ಒಳ್ಳೆಯವಿರಬೇಕು. ಕೇಳಿದ ಮಾತನ್ನು ನಂಬುವ ಜನರೇ ಬಹಳ. ಹೋದ ವರ್ಷ ಆದ ಜಾತ್ರೆ ದೊಡ್ಡದು. ಸೂರ್ಯನು ಮೂಡುವ ದಿಕ್ಕು ಪೂರ್ವ. ಬೇಡುವ ಬಡವರಿಗೆ ನೀಡುವ ಧನಿಕರು ಕಡಿಮೆ. ತಿಳಿದ ಸಂಗತಿಗಳಿಗಿಂತ ತಿಳಿಯದ ಸಂಗತಿಗಳೇ ಹೆಚ್ಚಿಗೆ ಇರುವವು.

# ೧೬. ಧಾತುಗಳಿಂದ ಉಂಟಾದ ಅವ್ಯಯಗಳು.

| | |
|---|---|
| ಕಲ್ಲನು ನೋಡುತ್ತ ಹೋದನು. | ಇಲ್ಲಿ ಎಲ್ಲ ವಾಕ್ಯಗಳಲ್ಲಿ ನೋಡುತ್ತ |
| ಕಮಲೆ ನೋಡುತ್ತ ಹೋದಳು. | ಈ ಒಂದೇ ರೂಪವು ಬಂದಿದೆ. ನಾಮ |
| ಹುಡುಗರು ನೋಡುತ್ತ ಹೋದರು. | ಗಳಿಗೆ ಲಿಂಗ ವಚನ ವಿಭಕ್ತಿಗಳಿಂದ |

ಬೇರೆ ಬೇರೆ ರೂಪಗಳಾಗುವಂತೆ ನೋಡುತ್ತ ಇದಕ್ಕೆ ಬೇರೆ ರೂಪವಿಲ್ಲ. ಹಾಡುತ್ತ, ಕೇಳುತ್ತ, ಮಲಗುತ್ತ, ಕರೆಯುತ್ತ ಮುಂತಾದವೂ ಇಂಥ ರೂಪ ಗಳು. ಇವು ಧಾತುಗಳಿಂದ ಉಂಟಾದ ಅವ್ಯಯಗಳು.

ನೋಡುತ್ತ = ನೋಡು + ಉತ್ತ; ಹಾಡುತ್ತ = ಹಾಡು+ಉತ್ತ ( ಉತ್ತ ಇದರಿಂದ ವರ್ತಮಾನಕಾಲವು ತೋರುವದು. ) ಧಾತುಗಳ ಮುಂದೆ ಉತ ಪ್ರತ್ಯಯವು ಸೇರುವದರಿಂದ ಈ ತರದ .ನೋಡುತ್ತ ಮೊದಲಾದ ಅವ್ಯಯ ಗಳಾಗಿವೆ. ಇವು ಧಾತುಗಳಿಂದ ಉಂಟಾದ ಅವ್ಯಯಗಳು.

| | |
|---|---|
| ಕಲ್ಲನು ನೋಡಿ ಹೋದನು | ಇಲ್ಲಿ ಎಲ್ಲ ವಾಕ್ಯಗಳಲ್ಲಿ ನೋಡಿ |
| ಕಮಲೆ ನೋಡಿ ಹೋದಳು | ಎಂಬ ಒಂದೇ ರೂಪವು ಬಂದಿದೆ. |
| ಹುಡುಗರು ನೋಡಿ ಹೋದರು | ನೋಡಿ ಇದಕ್ಕೆ ಬೇರೆ ರೂಪವಿಲ್ಲ |

ಹಾಡಿ, ಕೇಳಿ, ಮಲಗಿ ಮುಂತಾದವೂ ಇಂಥ ರೂಪಗಳು. ಇವು ಅವ್ಯ ಯುಗಳು.

ನೋಡಿ = ನೋಡು + ಇ; ಹಾಡಿ=ಹಾಡು+ಇ. ಧಾತುಗಳ ಮುಂದೆ. ಇ ಪ್ರತ್ಯಯವು ಸೇರುವದರಿಂದ ಈ ತರದ ನೋಡಿ ಮೊದಲಾದ ಅವ್ಯಯ ಗಳಾಗಿವೆ. ನುಡಿದು = ನುಡಿ+ದು; ಕರೆದು = ಕರೆ+ದು; ನುಡಿದು, ಕರೆದು, ಪಡೆದು ಮೊದಲಾದವೂ ಇದೇ ತರದ ರೂಪಗಳು. ಈ ರೂಪಗಳಾಗುವಾಗ ಧಾತುಗಳ ಮುಂದೆ ದು ಪ್ರತ್ಯಯವು ಸೇರಿದೆ. (ಇ, ದು ಪ್ರತ್ಯಯುಗಳಿಂದ ಭೂತಕಾಲವು ತೋರುವದು.) ಇವು ಧಾತುಗಳಿಂದುಂಟಾದ ಅವ್ಯಯಗಳು.

**ಕಲ್ಲನು ನೋಡದೆ ಹೋದನು;**
**ಕಮಲೆ ನೋಡದೆ ಹೋದಳು.**
**ಹುಡುಗರು ನೋಡದೆ ಹೋದರು.**

ಇಲ್ಲಿ ಎಲ್ಲ ವಾಕ್ಯಗಳಲ್ಲಿ **ನೋಡದೆ** ಈ ಒಂದೇ ರೂಪವು ಬಂದಿದೆ; ಇದಕ್ಕೆ ಬೇರೆ ರೂಪವಿಲ್ಲ. ಹಾಡದೆ, **ಕೇಳದೆ** ಮುಂತಾದವೂ ಇಂಥ ರೂಪಗಳು; ಇಂಥ ಅವ್ಯಯುಗಳು.

ನೋಡದೆ = ನೋಡು + ಅದೆ. ಹಾಡದೆ = ಹಾಡು + ಅದೆ.

ಧಾತುಗಳ ಮುಂದೆ ಅದೆ ಪ್ರತ್ಯಯುವು ಸೇರುವದರಿಂದ ಈ ತರದ **ನೋಡದೆ** ಮೊದಲಾದ ಅವ್ಯಯುಗಳಾಗಿವೆ. ( ಅದೆ ಪ್ರತ್ಯಯದಿಂದ ನಿಷೇಧವು **ತೋರು**ವದು. ) ಇವು ಧಾತುಗಳಿಂದ ಉಂಟಾದ ಅವ್ಯಯಗಳು.

* * * *

**ಗಾಳಿಯು** ಬೀಸಲು ಮರವು ಬಿದ್ದಿತು. ಮೊಸರನ್ನು **ಕಡೆಯುಲು ಮಜ್ಜಿ**ಗೆ ಆಗುವದು. ಇಲ್ಲಿ ಬಂದಿರುವ **ಬೀಸಲು ಕಡೆಯುಲು** ಇವು ಒಂದೇ **ರೂ**ಪದಲ್ಲಿ ಇರುವವು. ಇವಕ್ಕೆ ಬೇರೆ ರೂಪವಾಗುವದಿಲ್ಲ. ಆದದರಿಂದ **ಇವು** ಅವ್ಯಯುಗಳು.

ಬೀಸಲು + ಬೀಸು + ಅಲು; ಕಡೆಯುಲು = ಕಡೆ + ಅಲು.

ಧಾತುಗಳ ಮುಂದೆ ಅಲು ಪ್ರತ್ಯಯವು ಸೇರುವದರಿಂದ ಈ ರೂಪಗಳಾಗಿವೆ. ಈ ತರದ ರೂಪಗಳು ಧಾತುಗಳಿಂದ ಉಂಟಾದ ಅವ್ಯಯುಗಳು.

ಶಂಕರನು ಈಸಲಿಕ್ಕೆ ಹೋದನು. ಗಂಗೆ **ಉಣ್ಣ**ಲಿಕ್ಕೆ ಬಂದಳು.

ಇಲ್ಲಿ ಬಂದಿರುವ ಈಸಲಿಕ್ಕೆ **ಉಣ್ಣ**ಲಿಕ್ಕೆ ಇವು ಒಂದೇ ರೂಪದಲ್ಲಿರುವವು. ಇವಕ್ಕೆ ಬೇರೆ ರೂಪವಾಗುವದಿಲ್ಲ. ಆದದರಿಂದ ಇವು ಅವ್ಯಯುಗಳು.

ಈಸಲಿಕ್ಕೆ = ಈಸು + ಅಲಿಕ್ಕೆ; ಉಣ್ಣಲಿಕ್ಕೆ = ಉಣ್ಣು + ಅಲಿಕ್ಕೆ. **ಈ** ತರದ ರೂಪಗಳು ಧಾತುಗಳಿಂದ ಉಂಟಾದ ಅವ್ಯಯುಗಳು.

ದುಡಿದರೆ ಸುಖವಾಗುವದು. **ನಡೆದರೆ** ದಾರಿ ಸಾಗುವದು.

ಇಲ್ಲಿ ಬಂದಿರುವ ದುಡಿದರೆ, ನಡೆದರೆ ಇವು ಒಂದೇ ರೂಪದಲ್ಲಿರುವವು. ಇವುಗಳಿಗೆ ಬೇರೆ ರೂಪವಾಗುವದಿಲ್ಲ. ಆದದರಿಂದ ಇವು ಅವ್ಯಯುಗಳು.

**ದುಡಿದರೆ** = ದುಡಿ + ದರೆ; **ನಡೆದರೆ** = ನಡೆ + ದರೆ. ಧಾತುಗಳ ಮುಂದೆ ದರೆ ಪ್ರತ್ಯಯವು ಸೇರುವದರಿಂದ ಈ ರೂಪಗಳಾಗಿವೆ. ಈ ತರದ ರೂಪಗಳು ಧಾತುಗಳಿಂದ ಉಂಟಾದ ಅವ್ಯಯಗಳು.

## ಅಭ್ಯಾಸವೂ ಪ್ರಶ್ನಗಳೂ

೧, ಕೆಳಗಿನ ವಾಕ್ಯಗಳಲ್ಲಿ ಬಂದ ಧಾತುಗಳಿಂದುಂಟಾದ ಅವ್ಯಯಗಳನ್ನು ಹೇಳಿರಿ:—

ನರಿಯು ತಳಿಗೆಯಲ್ಲಿ ಪಾಯಸವನ್ನು ಹಾಕಿ ತಂದು ಬಕಪಕ್ಷಿಯ ಮುಂದೆ ಇಟ್ಟು ತಿನ್ನು ಎಂದು ಹೇಳಿ ತಾನೂ ತಿನ್ನಲು ಆರಂಭಿಸಿತು. ಬಕಪಕ್ಷಿಯ ಚುಂಚುವಿಗೆ ಪಾಯಸವು ಬಾರದೆ ಇರಲು ಅದು ತಿನ್ನದೆ ಕುಳಿತಿತು. ಮತ್ತು ಮಾತಾಡದೆ ಮನದೊಳಗೆ ಮರುಗುತ್ತ ಮನೆಗೆ ಹೋಯಿತು. ಬಕಪಕ್ಷಿಯು ನರಿಯ ಸೇಡನ್ನು ತೀರಿಸಿಕೊಳ್ಳಲು ಹವಣಿಸುತ್ತ ಇದ್ದಿತು.

ನಾವು ಪರರನ್ನು ನೋಯಿಸಿದರೆ ಪರರು ನಮ್ಮನ್ನು ನೋಯಿಸುವರು.

೨. ಕೆಳಗೆ ಕೊಟ್ಟ ಅವ್ಯಯಗಳನ್ನು ಹಾಕಿ ವಾಕ್ಯಗಳನ್ನು ರಚಿಸಿರಿ—

ಕುಡಿಯುತ್ತ, ಬೇಡಲು, ಬೇಸರದೆ, ಹೊಡೆಯಲಿಕ್ಕೆ ಅಂಜದೆ, ನಾಚಿ, ಮಲಗಿದರೆ, ಸರಿಯಲು, ಮಣಿದು, ಕುಣಿದರೆ.

೩. ಧಾತುವಿನಿಂದ ಎಷ್ಟು ತರದ ಅವ್ಯಯಗಳು ಉಂಟಾಗುವವು? ಬೀಳು ಧಾತುವಿನಿಂದ ಉಂಟಾಗುವ ಅವ್ಯಯಗಳನ್ನು ಹೇಳಿರಿ.

---

# ೧೭. ಪ್ರಯೋಗ

## ೧. ಕರ್ತರಿಪ್ರಯೋಗ

೧. **ಹುಡುಗರು ಓಡಿದರು.** ೨. **ಹುಡುಗಿ ಓಡಿದಳು.**

೩. **ದನಗಳು ಓಡುವವು.** ೪. **ನಾವು ಓಡುವೆವು.**

೧ನೆಯ ವಾಕ್ಯದಲ್ಲಿ ಹುಡುಗರು ಕರ್ತೃ, ಹುಡುಗರು ಇದು ಪ್ರಥಮ ಪುರುಷ ಪುಲ್ಲಿಂಗ ಬಹುವಚನವಾಗಿದೆ. ಓಡಿದರು ಈ ಕ್ರಿಯಾಪದವೂ ಪ್ರಥಮ ಪುರುಷ ಪುಲ್ಲಿಂಗ ಬಹುವಚನವಾಗಿದೆ. ಎಂದರೆ ಹುಡುಗರು ಈ ಕರ್ತೃಪದದ ಪುರುಷಲಿಂಗವಚನಗಳನ್ನು ಓಡಿದರು ಈ ಕ್ರಿಯಾಪದವು ಹೊಂದಿದೆ.

೨ನೆಯ ವಾಕ್ಯದಲ್ಲಿ ಕರ್ತೃವಾದ ಹುಡುಗಿ ಈ ಪದವು ಪ್ರಥಮ ಪುರುಷ ಸ್ತ್ರೀಲಿಂಗ ಏಕವಚನವಾಗಿದೆ. ಓಡಿದಳು ಈ ಕ್ರಿಯಾಪದವೂ ಪ್ರಥಮಪುರುಷ ಸ್ತ್ರೀಲಿಂಗ ಏಕವಚನವಾಗಿದೆ.

ಕರ್ತೃಪದದ ಪುರುಷ ಲಿಂಗ ವಚನಗಳು ಕ್ರಿಯಾಪದಕ್ಕೆ ಬಂದಿರುವ ವಾಕ್ಯಗಳು **ಕರ್ತರಿಪ್ರಯೋಗದವು.**

[ಕರ್ತರಿಪ್ರಯೋಗದ ವಾಕ್ಯದಲ್ಲಿ ಕರ್ತೃವು ಪ್ರಥಮಾವಿಭಕ್ತಿಯಲ್ಲಿರುವದು. ಕ್ರಿಯಾಪದವನ್ನು ಹಿಡಿದು ಯಾರು ಯಾವದು ಎಂದು ಪ್ರಶ್ನ ಮಾಡಿದರೆ ಬರುವ ಉತ್ತರವು ಕರ್ತೃವಾಗಿರುವದು ಮೇಲಿನ ೧ನೆಯ ವಾಕ್ಯದಲ್ಲಿ ಯಾರು ಓಡಿದರು? ಹುಡುಗರು; ಇದು ಅಲ್ಲಿ ಕರ್ತೃವು.]

## ಸಕರ್ಮಕ ಕರ್ತರಿಪ್ರಯೋಗ

**೧. ನಾಗು ಹಣ್ಣನ್ನು ತಿಂದಳು. ೨. ಗಂಗೆ ಭಾರತವನ್ನೋದಿದಳು.**

ಈ ವಾಕ್ಯಗಳಲ್ಲಿ ಕರ್ತೃಪದದ ಪುರುಷಲಿಂಗವಚನಗಳು ಕ್ರಿಯಾಪದಕ್ಕೆ ಇರುವವು. ಆದದರಿಂದ ಇವು ಕರ್ತರಿಪ್ರಯೋಗದ ವಾಕ್ಯಗಳು. ೧ನೆಯ ವಾಕ್ಯದಲ್ಲಿ ಹಣ್ಣನ್ನು, ೨ನೆಯ ವಾಕ್ಯದಲ್ಲಿ ಭಾರತವನ್ನು ಈ ಕರ್ಮಪದಗಳಿರುವವು. ಕರ್ಮವುಳ್ಳ ಕರ್ತರಿಪ್ರಯೋಗದ ವಾಕ್ಯಗಳು **ಸಕರ್ಮಕ ಕರ್ತರಿಪ್ರಯೋಗದ** ವಾಕ್ಯಗಳು. [ಸಕರ್ಮಕ=ಕರ್ಮವುಳ್ಳ]

[ಸಕರ್ಮಕ ಕರ್ತರಿಪ್ರಯೋಗದ ವಾಕ್ಯದಲ್ಲಿ ಕರ್ಮವು ದ್ವಿತೀಯಾ ವಿಭಕ್ತಿಯಲ್ಲಿರುವದು. ಕ್ರಿಯಾಪದವನ್ನು ಹಿಡಿದು ಯಾರನ್ನು ಏನನ್ನು ಎಂದು ಪ್ರಶ್ನ ಮಾಡಿದರೆ ಬರುವ ಉತ್ತರವು ಕರ್ಮವಾಗಿರುವದು. ಮೇಲಿನ ೧ನೆಯ ವಾಕ್ಯದಲ್ಲಿ ಏನನ್ನ ತಿಂದಳು? ಹಣ್ಣನ್ನು; ಇದು ಕರ್ಮವು.]

## ಅಕರ್ಮಕ ಕರ್ತರಿಪ್ರಯೋಗ

**ಹುಡುಗರು ಓಡಿದರು** ಮೊದಲಾದ ೫೮ನೆಯ ಪುಟದಲ್ಲಿ ಕೊಟ್ಟ ವಾಕ್ಯಗಳು ಕರ್ತರಿಪ್ರಯೋಗದವು. ಅವುಗಳಲ್ಲಿ ಕರ್ಮಪದವು ಬೇಕಾಗುವದಿಲ್ಲ. ಕರ್ಮಪದವು ಇಲ್ಲದ (ಬೇಕಾಗದ) ಕರ್ತರಿಪ್ರಯೋಗದ ವಾಕ್ಯಗಳು **ಅಕರ್ಮಕ ಕರ್ತರಿಪ್ರಯೋಗದ** ವಾಕ್ಯಗಳು.

(ಅಕರ್ಮಕ = ಕರ್ಮವಿಲ್ಲದ)

ಕರ್ತರಿಪ್ರಯೋಗದಲ್ಲಿ ಅಕರ್ಮಕ ಕರ್ತರಿಪ್ರಯೋಗ, ಸಕರ್ಮಕ ಕರ್ತರಿಪ್ರಯೋಗ ಎಂದು ಎರಡು ವಿಧಗಳು.

---

# ೧೮. ಪ್ರಯೋಗ

## ೨. ಕರ್ಮಣಿಪ್ರಯೋಗ

೧. **ರಾಮನಿಂದ ರಾವಣನು ಕೊಲ್ಲಲ್ಪಟ್ಟನು.**
೨. **ಮಲ್ಲನಿಂದ ಮರಗಳು ಕಡಿಯಲ್ಪಟ್ಟವು.**
೩. **ಜನರಿಂದ ನಾನು ಹೊಗಳಲ್ಪಟ್ಟೆನು.**

೧ನೆಯ ವಾಕ್ಯದಲ್ಲಿ ಕೊಲ್ಲಿಸಿಕೊಂಡವನು ಎಂದರೆ ಕೊಲ್ಲುವ ಕ್ರಿಯೆಗೆ ವಿಷಯವಾದವನು ರಾವಣನು. ಆದದರಿಂದ ರಾವಣನು ಕರ್ಮವು. ೨ನೆಯ ವಾಕ್ಯದಲ್ಲಿ ಮರಗಳು ಕರ್ಮವು, ೩ನೆಯ ವಾಕ್ಯದಲ್ಲಿ?

೧ನೆಯ ವಾಕ್ಯದಲ್ಲಿ ರಾವಣನು ಈ ಕರ್ಮಪದವು ಪ್ರಥಮಪುರುಷ ಪುಲ್ಲಿಂಗ ಏಕವಚನವಾಗಿದೆ. ಕೊಲ್ಲಲ್ಪಟ್ಟನು ಈ ಕ್ರಿಯಾಪದವೂ ಪ್ರಥಮ ಪುರುಷ ಪುಲ್ಲಿಂಗ ಏಕವಚನವಾಗಿದೆ. ಕರ್ಮಪದದ ಪುರುಷಲಿಂಗವಚನ ಗಳು ಕ್ರಿಯಾಪದಕ್ಕೆ ಬಂದಿವೆ. ೨ನೆಯ ವಾಕ್ಯದಲ್ಲಿ ಮರಗಳು ಈ ಕರ್ಮ ಪದವು ಪ್ರಥಮಪುರುಷ ನಪುಂಸಕಲಿಂಗ ಬಹುವಚನವಾಗಿದೆ. ಕಡಿಯ ಲ್ಪಟ್ಟವು ಈ ಕ್ರಿಯಾಪದವೂ ಪ್ರಥಮಪುರುಷ ನಪುಂಸಕಲಿಂಗ ಬಹುವಚನ ವಾಗಿದೆ. ೩ನೆಯ ವಾಕ್ಯದಲ್ಲಿ ನಾನು ಈ ಕರ್ಮಪದದಂತೆ ಕ್ರಿಯಾಪದವೂ ಉತ್ತಮ ಪುರುಷ, ಪುಲ್ಲಿಂಗ ಏಕವಚನವಾಗಿದೆ.

ಈ ವಾಕ್ಯಗಳಲ್ಲೆಲ್ಲ ಕರ್ಮಪದದ ಪುರುಷಲಿಂಗವಚನಗಳನ್ನು ಕ್ರಿಯಾ ಪದವು ಹೊಂದಿರುವದು. ಇಂಥ ವಾಕ್ಯಗಳು **ಕರ್ಮಣಿಪ್ರಯೋಗದವು.**

[ಕರ್ಮಣಿಪ್ರಯೋಗದಲ್ಲಿ ಕರ್ತೃವು ತೃತೀಯಾ ವಿಭಕ್ತಿಯಲ್ಲಿರುವದು. ಕ್ರಿಯಾಪದವನ್ನು ಹಿಡಿದು ಯಾರಿಂದ, ಯಾತರಿಂದ ಎಂದು ಪ್ರಶ್ನೆಮಾಡಿದರೆ ಬರುವ ಉತ್ತರವು ಕರ್ತೃವಾಗಿರುವದು. ೧ನೆಯ ವಾಕ್ಯದಲ್ಲಿ— ಯಾರಿಂದ ಕೊಲ್ಲಲ್ಪಟ್ಟನು? ರಾಮನಿಂದ; ರಾಮನಿಂದ-ಕರ್ತೃವು. ಕರ್ಮವು ಪ್ರಥಮಾ ವಿಭಕ್ತಿಯಲ್ಲಿರುವದು. ಕ್ರಿಯಾಪದವನ್ನು ಹಿಡಿದು ಯಾರು, ಯಾವದು

ಎಂದು ಪ್ರಶ್ನಮಾಡಿದರೆ ಬರುವ ಉತ್ತರವು ಕರ್ಮವಾಗಿರುವದು. ೧ನೆಯ ವಾಕ್ಯದಲ್ಲಿ-ಯಾರು ಕೊಲ್ಲಲ್ಪಟ್ಟರು? ರಾವಣನು; ರಾವಣನು ಕರ್ಮವು.]

ಕೊಲ್ಲಲ್ಪಡು=ಕೊಲ್ಲು (ಧಾತು)+ಅಲ್ಪಡು. ಕಡಿಯಲ್ಪಡು=ಕಡಿ+ಅಲ್ಪಡು.

ಕರ್ಮಣಿಪ್ರಯೋಗದಲ್ಲಿ ಧಾತುಗಳ ಮುಂದೆ ಅಲ್ಪಡು ಸೇರುವದು.

## ಅಭ್ಯಾಸವೂ ಪ್ರಶ್ನಗಳೂ

೧. ಕೆಳಗಿನ ವಾಕ್ಯಗಳು ಯಾವ ಯಾವ ಪ್ರಯೋಗದವೆಂಬುದನ್ನು ಹೇಳಿರಿ:—

ಸೂರ್ಯನು ಬೆಳಕನ್ನು ಕೊಡುತ್ತಾನೆ. ಸೂರ್ಯನಿಂದ ಬೆಳಕು ದೊರೆಯುತ್ತದೆ. ಸೂರ್ಯನಿಂದ ಕತ್ತಲೆ ಓಡಿಸಲ್ಪಡುವದು. ಸಜ್ಜನರಿಂದ ಜಗತ್ತಿಗೆ ಸುಖವು ದೊರೆಯುವದು. ದುರ್ಜನರು ಜಗತ್ತನ್ನು ಪೀಡಿಸುತ್ತಾರೆ. ಅರಸನು ಪ್ರಜೆಗಳನ್ನು ಸಂರಕ್ಷಿಸುತ್ತಾನೆ. ಅರಸನಿಂದ ಪ್ರಜೆಗಳು ಸಂರಕ್ಷಿಸಲ್ಪಡುತ್ತಾರೆ. ಭೀಮನು ಪಾಂಡವರಲ್ಲಿ ಬಲಿಷ್ಠನಾಗಿದ್ದನು. ಒಳ್ಳೆಯ ಮಾತಿನಿಂದ ಜನರು ಗೆಳೆಯರಾಗುತ್ತಾರೆ. ಕೆಟ್ಟ ಮಾತುಗಳಿಂದ ಜನರು ನಮ್ಮನ್ನು ದ್ವೇಷಿಸುತ್ತಾರೆ. ವಿದ್ಯಾಭ್ಯಾಸವು ಮನುಷ್ಯನಿಗೆ ಸುಖವನ್ನು ಕೊಡುವದು.

೨. ಕರ್ತರಿಪ್ರಯೋಗದಲ್ಲಿ ಕರ್ತೃವನ್ನೂ, ಕರ್ಮಣಿಪ್ರಯೋಗದಲ್ಲಿ ಕರ್ಮವನ್ನೂ ಹೇಗೆ ಕಂಡುಹಿಡಿಯುವಿರಿ?

**ಪ್ರಯೋಗಗಳು ಎರಡು:— ೧. ಕರ್ತರಿಪ್ರಯೋಗ. ೨. ಕರ್ಮಣಿಪ್ರಯೋಗ. ಕರ್ತರಿಪ್ರಯೋಗದಲ್ಲಿ ಎರಡು ಭೇದಗಳು:— ೧. ಅಕರ್ಮಕ ಕರ್ತರಿಪ್ರಯೋಗ. ೨. ಸಕರ್ಮಕಕರ್ತರಿಪ್ರಯೋಗ.**

---

# ೧೯. ವಾಕ್ಯ ಪದ ಸ್ವರೂಪಕಥನ

## (ಗ್ರಂಥದ ಮೇಲೆ ವ್ಯಾಕರಣ ಹೇಳುವದು)

ನೀವು ಈ ವರೆಗೆ ವಾಕ್ಯ, ಪದ, ಮೊದಲಾದವುಗಳ ವಿಷಯವಾಗಿ ತಿಳಿದುಕೊಂಡಿರುವ ಸಂಗತಿಗಳನ್ನು ನಿಮ್ಮ ಪುಸ್ತಕದೊಳಗಿನ ವಾಕ್ಯಗಳಲ್ಲಿ ಹೇಗೆ ಹೇಳಬೇಕೆಂಬುದು ಮುಂದೆ ತೋರಿಸಿದೆ.

**ವಾಕ್ಯ:**— ವಿಜಯನಗರದ ಅರಸರು ಕರ್ನಾಟಕದ ರಾಜ್ಯವನ್ನು ಚೆನ್ನಾಗಿ ಆಳಿದರು.

**ಉದ್ದೇಶ್ಯ:**— ವಿಜಯನಗರದ ಅರಸರು. **ಆಖ್ಯಾತ:**— ಕರ್ನಾಟಕದ ರಾಜ್ಯವನ್ನು ಚೆನ್ನಾಗಿ ಆಳಿದರು.

**ಪ್ರಯೋಗ:**— ಅರಸರು-ಕರ್ತೃ, ರಾಜ್ಯವನ್ನು-ಕರ್ಮ, ಆಳಿದರು-ಕ್ರಿಯಾಪದ, ಸಕರ್ಮಕ ಕರ್ತರಿಪ್ರಯೋಗವು.

**ವಿಜಯನಗರದ:**— ನಾಮಪದ, ವಿಜಯನಗರ ಈ ಅಕಾರಾಂತ ನಪುಂಸಕಲಿಂಗ ಅಂಕಿತನಾಮದ ಷಷ್ಠೀವಿಭಕ್ತಿಯ ಏಕವಚನದ ರೂಪವು. ಇದು ಅರಸರು ಈ ಪದಕ್ಕೆ ಸಂಬಂಧಿಸಿದೆ.

**ಅರಸರು:**— ನಾಮಪದ, ಅರಸ ಈ ಅಕಾರಾಂತ ಪುಲ್ಲಿಂಗ ರೂಢನಾಮದ ಪ್ರಥಮಾ ವಿಭಕ್ತಿಯ ಬಹುವಚನದ ರೂಪವು. ಆಳಿದರು ಈ ಕ್ರಿಯೆಗೆ ಕರ್ತೃವಾಗಿದೆ.

**ಕರ್ನಾಟಕದ:**—ನಾಮಪದ. ಕರ್ನಾಟಕ ಈ ಅಕಾರಾಂತ ನಪುಂಸಕಲಿಂಗ ಅಂಕಿತನಾಮದ ಷಷ್ಠೀವಿಭಕ್ತಿಯ ಏಕವಚನದ ರೂಪವು. ಇದು ರಾಜ್ಯವನ್ನು ಇದಕ್ಕೆ ಸಂಬಂಧಿಸಿದೆ.

**ರಾಜ್ಯವನ್ನು:**— ನಾಮಪದ. ರಾಜ್ಯ ಈ ಅಕಾರಾಂತ ನಪುಂಸಕಲಿಂಗ ರೂಢನಾಮದ ದ್ವಿತೀಯಾವಿಭಕ್ತಿಯ ಏಕವಚನದ ರೂಪವು. ಇದು ಆಳಿದರು ಈ ಕ್ರಿಯೆಗೆ ಕರ್ಮವಾಗಿದೆ.

**ಚೆನ್ನಾಗಿ:**— ಅವ್ಯಯ. ಆಳಿದರು ಈ ಕ್ರಿಯೆಗೆ ವಿಶೇಷಣ. ಇದು ಕ್ರಿಯಾವಿಶೇಷಣಾವ್ಯಯ.

**ಆಳಿದರು:**— ಕ್ರಿಯಾಪದ. ಆಳು ಧಾತುವಿನ ಕಾಲಾರ್ಥಕ ಭೂತಕಾಲ ಪ್ರಥಮಪುರುಷ ಬಹುವಚನದ ರೂಪವು.

೨. **ವಾಕ್ಯ— ಒಳ್ಳೆಯ ಹುಡುಗನು ಸಾಲೆಯಲ್ಲಿ ಗುರುಗಳ ಅಪ್ಪಣೆಯನ್ನು ಬೇಸರದೆ ಪಾಲಿಸುತ್ತಾನೆ.**

**ಉದ್ದೇಶ್ಯ:**— ಒಳ್ಳೆಯ ಹುಡುಗನು.

**ಆಖ್ಯಾತ:**— ಸಾಲೆಯಲ್ಲಿ ಗುರುಗಳ ಅಪ್ಪಣೆಯನ್ನು ಬೇಸರದೆ ಪಾಲಿಸುತ್ತಾನೆ.

**ಪ್ರಯೋಗ:**— ಒಳ್ಳೆಯ ಹುಡುಗನು-ಕರ್ತೃ; ಅಪ್ಪಣೆಯನ್ನು— ಕರ್ಮ; ಪಾಲಿಸುತ್ತಾನೆ—ಕ್ರಿಯಾಪದ. ಸಕರ್ಮಕ ಕರ್ತರಿಪ್ರಯೋಗವು.

**ಒಳ್ಳೆಯ ಹುಡುಗನು:**— ಒಳ್ಳೆಯ—ಗುಣವಾಚಕ ವಿಶೇಷಣ; ಇದರ ವಿಶೇಷ್ಯವು ಹುಡುಗನು.

**ಹುಡುಗನು:**— ನಾಮಪದ. ಹುಡುಗ ಈ ಅಕಾರಾಂತ ಪುಲ್ಲಿಂಗ ರೂಢನಾಮದ ಪ್ರಥಮಾವಿಭಕ್ತಿಯ ಏಕವಚನದ ರೂಪವು. ಪಾಲಿಸುತ್ತಾನೆ ಈ ಕ್ರಿಯೆಯ ಕರ್ತೃವು.

**ಶಾಲೆಯಲ್ಲಿ;**— ನಾಮಪದ. ಸಾಲೆ ಈ ಎಕಾರಾಂತ ನಪುಂಸಕಲಿಂಗ ರೂಢನಾಮದ ಸಪ್ತಮೀವಿಭಕ್ತಿಯ ಏಕವಚನದ ರೂಪವು. ಸಾಲೆ ಅಧಿಕರಣವು.

**ಗುರುಗಳ:**— ನಾಮಪದ. ಗುರು ಈ ಉಕಾರಾಂತ ಪುಲ್ಲಿಂಗ ರೂಢನಾಮದ ಷಷ್ಠೀವಿಭಕ್ತಿಯ ಬಹುವಚನದ ರೂಪವು. ಅಪ್ಪಣೆಯನ್ನು ಇದಕ್ಕೆ ಸಂಬಂಧಿಸಿದೆ.

**ಅಪ್ಪಣೆಯನ್ನು:**— ನಾಮಪದ. ಅಪ್ಪಣೆ ಈ ಎಕಾರಾಂತ ನಪುಂಸಕಲಿಂಗ ರೂಢನಾಮದ ದ್ವಿತೀಯಾವಿಭಕ್ತಿಯ ಏಕವಚನದ ರೂಪವು. ಇದು ಪಾಲಿಸುತ್ತಾನೆ ಈ ಕ್ರಿಯೆಗೆ ಕರ್ಮವಾಗಿದೆ.

**ಬೇಸರದೆ:**— ಅವ್ಯಯ. ಬೇಸರು ಧಾತುವಿನಿಂದ ಉಂಟಾದದ್ದು.

**ಪಾಲಿಸುತ್ತಾನೆ:**— 'ಕ್ರಿಯಾಪದ. ಪಾಲಿಸು ಧಾತುವಿನ ಕಲಾರ್ಥಕ (ವರ್ತಮಾನಕಾಲದ) ಪ್ರಥಮಪುರುಷ ಪುಲ್ಲಿಂಗ ಏಕವಚನದ ರೂಪವು.

## ಅಭ್ಯಾಸ

ಕೆಳಗಿನ ವಾಕ್ಯಗಳಲ್ಲಿ ವಾಕ್ಯ ಪದ ಸ್ವರೂಪವನ್ನು ಹೇಳಿರಿ:—

೧. ಒಳ್ಳೆಯ ಅರಸನು ತನ್ನ ರಾಜ್ಯದ ಪ್ರಜೆಗಳನ್ನು ಸರಿಯಾಗಿ ಸಲಹುತ್ತಾನೆ.
೨. ಮಳೆಗಾಲದಲ್ಲಿ ಮಳೆಯ ನೀರಿನಿಂದ ಗಿಡಗಳು ಚೆನ್ನಾಗಿ ಬೆಳೆಯುವವು.
೩. ಬಾಲಕರು ಸಾಲೆಯಲ್ಲಿ ವಿದ್ಯೆಯ ಆನಂದವನ್ನು ಪಡೆಯಲಿ.

—: ಸಮಾಪ್ತ :—

# ಅನುಬಂಧ ೧. ೨೦. ವಾಕ್ಯವಿಭಜನೆ

ವಾಕ್ಯದಲ್ಲಿ ಆಖ್ಯೇಯಭಾಗ, ಆಖ್ಯಾತಭಾಗ ಎಂಬ ಎರಡು ಭಾಗ ಮಾಡುವದನ್ನು ಕಲಿತಿರುವಿರಿ. ಕೆಳಗೆ ತೋರಿಸಿದಂತೆ ವಾಕ್ಯವನ್ನು ಕೊಷ್ಟಕಗಳಲ್ಲಿ ವಿಭಜಿಸಿರಿ:—

ವಾಕ್ಯ (೧) ಸಂಗನು ತಾಯಿಯನ್ನು ಸಲಹುತ್ತಾನೆ.

| | ಆಖ್ಯೇಯ ಭಾಗ | ಆಖ್ಯಾತ ಭಾಗ | |
|---|---|---|---|
| ವಾಕ್ಯ | ಕರ್ತೃ | ಕರ್ಮ | ಕ್ರಿಯಾಪದ |
| ಸಂಗನು ತಾಯಿಯನ್ನು ಸಲಹುತ್ತಾನೆ. | ಸಂಗನು | ತಾಯಿಯನ್ನು | ಸಲಹುತ್ತಾನೆ |

ವಾಕ್ಯ (೨) ಕೂಲಿಕಾರನಾದ ಸಂಗನು ತನ್ನ ಮುಪ್ಪಿನ ತಾಯಿಯನ್ನು ಜತನದಿಂದ ಸಲಹುತ್ತಾನೆ.

| | ಆಖ್ಯೇಯ ಭಾಗ | | ಆಖ್ಯಾತ ಭಾಗ. | | | |
|---|---|---|---|---|---|---|
| ವಾಕ್ಯ | ಕರ್ತೃವಿಗೆ ಸಂಬಂಧಿಸಿದ ಪದ | ಕರ್ತೃ | ಕರ್ಮಕ್ಕೆ ಸಂಬಂಧಿಸಿದ ಪದ | ಕರ್ಮ | ಕ್ರಿಯಾಪದಕ್ಕೆ ಸಂಬಂಧಿಸಿದ ಪದ | ಕ್ರಿಯಾಪದ |
| ಕೂಲಿಕಾರನಾದ...ಸಲಹುತ್ತಾನೆ. | ಕೂಲಿಕಾರನಾದ | ಸಂಗನು | ೧. ತನ್ನ ೨. ಮುಪ್ಪಿನ | ತಾಯಿಯನ್ನು | ಜತನದಿಂದ | ಸಲಹುತ್ತಾನೆ. |

ಈ ವಾಕ್ಯವು ಕರ್ತರಿಪ್ರಯೋಗದ್ದು. ಕರ್ತರಿಪ್ರಯೋಗದ ವಾಕ್ಯದಲ್ಲಿ ಕರ್ತೃ, ಕರ್ತೃವಿಗೆ ಸಂಬಂಧಿಸಿದ ಪದ ಇವು ಆಖ್ಯೇಯಭಾಗದಲ್ಲಿ ಸೇರುವವು. ಕರ್ಮಕ್ಕೆ ಸಂಬಂಧಿಸಿದ ಪದ ಮತ್ತು ಕರ್ಮ, ಕ್ರಿಯಾಪದಕ್ಕೆ ಸಂಬಂಧಿಸಿದ ಪದ ಮತ್ತು ಕ್ರಿಯಾಪದ ಇವೆಲ್ಲ ಆಖ್ಯಾತಭಾಗಕ್ಕೆ ಸೇರುವವು.

ಇಲ್ಲಿ ಕೂಲಿಕಾರನಾದ ಈ ಪದವು ಸಂಗನು ಎಂಬ ಕರ್ತೃಪದದ ವಿಶೇಷಣವು. ಆದದರಿಂದ ಕರ್ತೃಪದಕ್ಕೆ ಸಂಬಂಧಿಸಿದ್ದು. ತನ್ನ ಮುಪ್ಪಿನ,

ಈ ಪದಗಳು ತಾಯಿಯನ್ನು ಈ ಕರ್ಮಪದಕ್ಕೆ ಸಂಬಂಧಿಸಿದವು. ಜತನದಿಂದ ಎಂಬದು ಕ್ರಿಯಾವಿಶೇಷಣವು. ಅದರಿಂದ ಅದು ಕ್ರಿಯಾಪದಕ್ಕೆ ಸಂಬಂಧಿಸಿದ್ದು.

ವಾಕ್ಯ (೩)–ಶ್ರೀಮಂತನಾದ ಕೃಷ್ಣನು ವಿದ್ಯಾರ್ಥಿದಶೆಯಲ್ಲಿ ಗುರುವಿಗಾಗಿ ಅಡವಿಯಿಂದ ಭಾರವಾದ ಕಟ್ಟಿಗೆ ಹೊರೆಯನ್ನು ತರುತ್ತಿದ್ದನು.

| | ಉದ್ದೇಶ್ಯ ಭಾಗ | | ಆಖ್ಯಾತಭಾಗ | | | |
|---|---|---|---|---|---|---|
| ವಾಕ್ಯ | ಕರ್ತೃವಿಗೆ ಸಂಬಂಧಿಸಿದ ಪದ | ಕರ್ತೃ | ಕರ್ಮಕ್ಕೆ ಸಂಬಂಧಿಸಿದ ಪದ | ಕರ್ಮ | ಕ್ರಿಯಾಪದಕ್ಕೆ ಸಂ. ಪದ | ಕ್ರಿಯಾಪದ |
| ಶ್ರೀಮಂತನಾದ ............... ತರುತ್ತಿದ್ದನು | ಶ್ರೀಮಂತನಾದ | ಕೃಷ್ಣನು | ಭಾರವಾದ | ಕಟ್ಟಿಗೆ ಹೊರೆಯನ್ನು | ೧. ವಿದ್ಯಾ....ಲ್ಲಿ ೨ ಅಡವಿಯಿಂದ ೩ ಗುರುವಿಗಾಗಿ | ತರುತ್ತಿದ್ದನು |

ಯಾವಾಗ ತರುತ್ತಿದ್ದನು? ವಿದ್ಯಾರ್ಥಿದಶೆಯಲ್ಲಿ. ಯಾರಿಗಾಗಿ ತರುತ್ತಿದ್ದನು? ಗುರುವಿಗಾಗಿ. ಎಲ್ಲಿಂದ? ಅಡವಿಯಿಂದ. ವಿದ್ಯಾರ್ಥಿದಶೆಯಲ್ಲಿ, ಗುರುವಿಗಾಗಿ ಅಡವಿಯಿಂದ ಈ ೩ ಪದಗಳು ಕ್ರಿಯಾಪದಕ್ಕೆ ಸಂಬಂಧಿಸಿರುವವು.

ಮೇಲೆ ವಿಭಜಿಸಿ ತೋರಿಸಿದ ೧ನೆಯ, ೨ನೆಯ ವಾಕ್ಯಗಳಲ್ಲಿ ಸಲಹುತ್ತಾನೆ ಎಂಬ ಒಂದು ಕ್ರಿಯಾಪದವಿದೆ; ೩ನೆಯ ವಾಕ್ಯದಲ್ಲಿ ತರುತ್ತಿದ್ದನು ಎಂಬ ಒಂದು ಕ್ರಿಯಾಪದವುಂಟು. ಬೇರೆ ಕ್ರಿಯಾವಾಚಕಗಳು (ಕ್ರಿಯಾಪದ ಮು.) ಆ ವಾಕ್ಯಗಳಲ್ಲಿ ಇಲ್ಲ. ಹೀಗೆ ಬೇರೆ ಕ್ರಿಯಾವಾಚಕಗಳಿಲ್ಲದೆ ಒಂದೇ ಕ್ರಿಯಾಪದವುಳ್ಳ ವಾಕ್ಯಕ್ಕೆ **ಸಾಮಾನ್ಯ ವಾಕ್ಯ** ಎಂಬ ಹೆಸರು.

ಅಭ್ಯಸನ. ಕೆಳಗಿನ ಸಾಮಾನ್ಯ ವಾಕ್ಯಗಳನ್ನು ಮೇಲೆ ತೋರಿಸಿದಂತೆ ವಿಭಜಿಸಿರಿ:—

೧. ಲಕ್ಷ್ಮೀಶ ಕವಿಯ ಜೈಮಿನಿಭಾರತಕಾವ್ಯವು ಕರ್ನಾಟಕದ ಬಹುಜನರನ್ನು ಆನಂದಗೊಳಿಸುವದು. ೨ ಅಶಕ್ತರಾದ ತಾಯಿಂದಿರು ಆಕಳ ಹಾಲಿನಿಂದ ತಮ್ಮ ಚಿಕ್ಕಮಕ್ಕಳನ್ನು ಕಾಪಾಡುತ್ತಾರೆ. ೩. ಹಿಂದುಸ್ಥಾನದಲ್ಲಿ ಹಲವರು ಸೋಮಾರಿತನದಿಂದ ತಮಗೆ ಬಡತನವನ್ನು ತಂದುಕೊಳ್ಳುವರು. ೪. ಬಲಶಾಲಿಯಾದ ಭೀಮಸೇನನು ಅಡವಿಯಲ್ಲಿ ದುಷ್ಟರಾದ ರಾಕ್ಷಸರನ್ನು ಕೊಂದನು.

ವಾಕ್ಯ(೪)–ದಯಾಳುವಾದ ಪರಮೇಶ್ವರನಿಂದ ಈ ಎಲ್ಲ ಲೋಕವು ಯಾವಾಗಲೂ ರಕ್ಷಿಸಲ್ಪಡುತ್ತದೆ.

| ವಾಕ್ಯ | ಆಖ್ಯೇಯಭಾಗ | | ಆಖ್ಯಾತ ಭಾಗ | | | |
|---|---|---|---|---|---|---|
| | ಕರ್ಮಕ್ಕೆ ಸಂಬಂಧಿಸಿದ ಪದ | ಕರ್ಮ | ಕರ್ತೃವಿಗೆ ಸಂಬಂಧಿಸಿದ ಪದ | ಕರ್ತೃ | ಕ್ರಿಯಾಪದಕ್ಕೆ ಸಂ. ಪದ | ಕ್ರಿ. ಪದ |
| ದಯಾಳುವಾದ ........ ರಕ್ಷಿಸಲ್ಪಡುತ್ತದೆ | ೧. ಈ ೨. ಎಲ್ಲ | ಲೋಕವು | ದಯಾಳುವಾದ | ಪರಮೇಶ್ವರನಿಂದ | ಯಾವಾಗಲೂ | ರಕ್ಷಿಸಲ್ಪಡುತ್ತದೆ |

ಯಾರಿಂದ ರಕ್ಷಿಸಲ್ಪಡುತ್ತದೆ? ಪರಮೇಶ್ವರನಿಂದ. ಇದು ಕರ್ತೃವು. ಕರ್ಮಣಿಪ್ರಯೋಗದ ವಾಕ್ಯಗಳಲ್ಲಿ ಕರ್ತೃವು ಕ್ರಿಯಾಪದಕ್ಕೆ ಸಂಬಂಧಿಸುವದು; ಆದದರಿಂದ 'ಪರಮೇಶ್ವರನಿಂದ' ಈ ಕರ್ತೃವು ಆಖ್ಯಾತಭಾಗದಲ್ಲಿ ಸೇರುವದು. ಕರ್ಮಪದವು ಆಖ್ಯೇಯವಾಗುವದರಿಂದ ಅದಕ್ಕೆ ಸಂಬಂಧಿಸಿದ ಈ, ಎಲ್ಲ ಎಂಬೀ ಎರಡು ಪದಗಳು ಆಖ್ಯೇಯ ಭಾಗದಲ್ಲಿ ಸೇರುವವು. ಉಳಿದ ಪದಗಳು ಆಖ್ಯಾತಭಾಗದಲ್ಲಿ ಸೇರುವವು.

ಅಭ್ಯಸನ–ಕೆಳಗಿನ ವಾಕ್ಯಗಳನ್ನು ಮೇಲೆ ತೋರಿಸಿದಂತೆ ವಿಭಜಿಸಿರಿ.

೧. ಮಿತವ್ಯಯಿಗಳಾದ ಜನರಿಂದ ಪರರಿಗೆ ಸಹಾಯವು ಮಾಡಲ್ಪಡುತ್ತದೆ.

೨. ಲಕ್ಷ್ಮಣನಿಂದ ವನವಾಸದಲ್ಲಿ ರಾಮನ ಸೇವೆಯು ಪರಿಪರಿಯಾಗಿ ಮಾಡಲ್ಪಟ್ಟಿತು.

---

## ಅನುಬಂಧ ೨. ಸಮಾಸ

ಸಂಧಿಯಲ್ಲಿ ಶಬ್ದಗಳು ಕೂಡುವದನ್ನು ಬಲ್ಲಿರಿ. ಕೆಳಗಿನ ಉದಾಹರಣಗಳನ್ನು ನೋಡಿರಿ:—

**ತಲೆಗೂದಲು = ತಲೆಯ ಕೂದಲು**

**ಎಲೆಹೂಕಾಯಿಗಳು = ಎಲೆಯು, ಹೂವು, ಕಾಯಿಗಳು.**

ತಲೆಯ ಮತ್ತು ಕೂದಲು ಈ ಎರಡು ಪದಗಳು ಕೂಡಿ ತಲೆಗೂದಲು ಈ ಒಂದು ಪದವಾಗಿದೆ.

ಎಲೆಯು, ಹೂವು, ಕಾಯಿಯು ಈ ಮೂರು ಪದಗಳು ಕೂಡಿ ಎಲೆ ಹೂಕಾಯಿಗಳು ಎಂಬ ಒಂದ ಪದವಾಗಿದೆ. ಕೆಲವು ಪದಗಳು ಕೂಡಿ ಒಂದು ಪದವಾಗುವದಕ್ಕೆ **ಸಮಾಸ** ಎಂಬ ಹೆಸರು.

**ಕೋಲಾಟವು** = ಕೋಲಿನ ಆಟವು. **ಕೈಬೆರಳುಗಳು = ಕೈಯ** **ಗಳು**. ಈ ಸಮಾಸಗಳಲ್ಲಿ ಆಟವು ಬೆರಳುಗಳು ಈ ಎರಡನೆಯ ಪದ ಮುಖ್ಯವಾಗಿವೆ. ಇಂಥ ಸಮಾಸಕ್ಕೆ **ತತ್ಪುರುಷ** ಎಂಬ ಹೆಸರು.

**ದೊಡ್ಡಮನೆ = ದೊಡ್ಡದು(ಆದ) ಮನೆ; ಸವಿಯೂಟವು = ಸವಿ** **(ಯಾದ) ಊಟವು.** ಈ ಸಮಾಸಗಳಲ್ಲಿ ಮೊದಲನೆಯ ಪದಗಳು ವಿಶೇಷಣಗಳು; ೨ನೆಯ ಪದಗಳು ವಿಶೇಷ್ಯಗಳು. ವಿಶೇಷಣ ವಿಶೇಷ್ಯಗಳು ಕೂಡಿ ಆದ ಇಂಥ ಸಮಾಸಕ್ಕೆ **ಕರ್ಮಧಾರಯ** ಎಂಬ ಹೆಸರು.

**ಎರಡು ಹಲ್ಲಿ = ಎರಡು ಹಲ್ಲುಗಳು ಉಳ್ಳದ್ದು**
**ಮಂದಮತಿ = ಮಂದವಾದ ಮತಿ ಉಳ್ಳವನು.**
**ಮುಕ್ಕಣ್ಣನು = ಮೂರು ಕಣ್ಣುಗಳು ಉಳ್ಳವನು**

ಈ ಸಮಾಸಗಳಲ್ಲಿ ಉಳ್ಳ ಎಂಬ ಅರ್ಥವು ತೋರುವದು. ಇಂಥ ಸಮಾಸಕ್ಕೆ **ಬಹುವ್ರೀಹಿ** ಎಂಬ ಹೆಸರು.

**ಗಿಡಬಳ್ಳಿಗಳು** = ಗಿಡವೂಬಳ್ಳಿಯೂ; ತಾಯಿತಂದೆಗಳು = ತಾಯಿಯೂ **ತಂದೆಯೂ**. ಈ ಸಮಾಸಗಳಲ್ಲಿ ಎರಡು ಪದಗಳೂ ಮುಖ್ಯವಾಗಿವೆ. (ಗಿಡವು + ಊ). ಹೀಗೆ ಹಲವು ಪ್ರಥಮಾವಿಭಕ್ತಿಯ ಪದಗಳು ಸೇರಿ ಆಗುವ ಸಮಾಸಕ್ಕೆ **ದ್ವಂದ್ವ** ಎಂಬ ಹೆಸರು.

**ಕಳವಳಬಟ್ಟನು = ಕಳವಳವನ್ನು** ಪಟ್ಟನು. **ಸುಖಬಟ್ಟು = ಸುಖವನ್ನು ಪಟ್ಟು**. ಇಲ್ಲಿ ಎರಡನೆಯ ಪದಗಳು ಕ್ರಿಯೆಯನ್ನು ಹೇಳುವಂಥವಾಗಿವೆ. ಇಂಥ ಸಮಾಸಕ್ಕೆ **ಕ್ರಿಯಾಸಮಾಸ** ಎಂಬ ಹೆಸರ.

**ತತ್ಪುರುಷ, ಕರ್ಮಧಾರಯ, ಬಹುವ್ರೀಹಿ, ದ್ವಂದ್ವ, ಕ್ರಿಯಾ ಸಮಾಸ** ಇವು ಮುಖ್ಯ ಸಮಾಸಗಳು.

| | |
|---|---|
| **ತಲೆಗೂದಲು = ತಲೆಯ ಕೂದಲು**<br>**ಮುಕ್ಕಣ್ಣನು=ಮೂರು ಕಣ್ಣುಳ್ಳವನು** | ಈ ಮೇರೆಗೆ ಸಮಾಸದ ಅರ್ಥವು ತಿಳಿಯುವಂತೆ ಬಿಡಿಸಿ ಹೇಳುವದು **ವಿಗ್ರಹವು**. |

# ಅನುಬಂಧ ೨. ಅಕ್ಷರಗಳು.

ಅ, ಆ, ಇ, ಈ, ಉ, ಊ, ಋ. ೠ, ಎ, ಏ, ಐ, ಒ, ಓ, ಔ ಈ ೧೪ ಅಕ್ಷರಗಳಿಗೆ **ಸ್ವರ**, ಎಂಬ ಹೆಸರು.

ಅ, ಇ, ಉ, ಋ, ಎ, ಒ, ಈ ೬ ಸ್ವರಗಳಿಗೆ **ಹ್ರಸ್ವಸ್ವರ** ಎ ಹೆಸರು. [ ಹ್ರಸ್ವ= ಗಿಡ್ಡ ]

ಆ, ಈ, ಊ, ೠ, ಏ, ಐ, ಓ, ಔ ಈ ೮ ಸ್ವರಗಳಿಗೆ **ದೀ( ಸ್ವರ** ಎಂಬ ಹೆಸರು. [ ದೀರ್ಘ = ಉದ್ದ ]

ಕ್, ಖ್, ಗ್, ಘ್, ಙ್, ಚ್ ಛ್, ಜ್, ಝ್, ಞ್,
ಟ್, ಠ್, ಡ್, ಢ್, ಣ್, ತ್, ಥ್, ದ್ ಧ್ ನ್,
ಪ್, ಫ್, ಬ್ ಭ್, ಮ್,
ಯ್, ರ್, ಲ್, ವ್, ಶ್, ಷ್, ಸ್ ಹ್ ಳ್

ಈ ಮೂವತ್ತು ನಾಲ್ಕು ಅಕ್ಷರಗಳಿಗೆ **ವ್ಯಂಜ**ನ ಎಂಬ ಹೆಸರು.

ಅಂ ಇದನ್ನು ಉಚ್ಚರಿಸಿದಾಗ ಅ ಅಕ್ಷರದ ಮುಂದೆ ಆಗುವ ಟಿ ರಣೆಯು **ಅನುಸ್ವಾರವು.**

ಅಃ ಇದನ್ನು ಉಚ್ಚರಿಸಿದಾಗ ಅ ಅಕ್ಷರದ ಮುಂದೆ ಆಗುವ ಟಿ ರಣೆಯು **ವಿಸರ್ಗವು** ಅನುಸ್ವಾರ ವಿಸರ್ಗಗಳಿಗೆ **ಅಯೋಗವಾಹ** ಹೆಸರು.

**೧೪ ಸ್ವರಗಳು, ೩೪ ವ್ಯಂಜನಗಳು, ೨ ಅಯೋಗವಾಹಗ ಕೂಡಿ ಒಟ್ಟಿಗೆ ೫೦ ಅಕ್ಷರಗಳು.**

ಅಕಾರ ಎಂದರೆ ಅ ಎಂಬ ಅಕ್ಷರವು; ಕಕಾರ ಎಂದರೆ ಕ್ ಎಂಬ ಅಕ್ಷರವು

ಒಂದು ಅಕ್ಷರವನ್ನು ಹೇಳುವಾಗ ಮುಂದೆ **ಕಾರ** ಎಂಬುದನ್ನು ಸೇರಿ ಸುವರು.

ಕ್ಕ = ಕ್ + ಕ್ + ಅ; ಕ್ತ = ಕ್ + ತ್+ಅ; ಸ್ತ್ರ = ಸ್+ತ್+ರ್+ಅ.

ಹೀಗೆ ಅನೇಕ ವ್ಯಂಜನಗಳ ಮುಂದೆ ಸ್ವರವು ಸೇರಿದರೆ **ಸಂಯುಕ್ತಾ ಕ್ಷರಗಳು** ಇಲ್ಲವೆ ಒತ್ತಕ್ಷರಗಳು ಆಗುವವು.

ಅಕ್ಷರಗಳಿಂದ ಶಬ್ದಗಳಾಗುವವು. ಶಬ್ದಗಳಿಂದ ಪದಗಳಾಗುವವು ಪದಗಳಿಂದ ವಾಕ್ಯಗಳಾಗುವವು. ಭಾಷೆಯು ( ಮಾತು ) ವಾಕ್ಯರೂಪ ವಾಗಿರುವದು;

# ಶಿಕ್ಷಕರಿಗೆ ಸೂಚನೆಗಳು

—+—

ಇವು ವ್ಯಾಕರಣದ ಆರಂಭದ ಪಾಠಗಳು. ವಿಷಯವು ಸಮಗ್ರವಾಗು ಕಡೆಗಿಂತ ಕಲಿತ ವಿಷಯಗಳಿಂದ ವಿದ್ಯಾರ್ಥಿಗಳಿಗೆ ಸ್ಪಷ್ಟವಾದ ನೆಯುಂಟಾಗುವದರ ಕಡೆಗೆ ಹೆಚ್ಚಿನ ಗಮನವು ಕೊಡಲ್ಪಟ್ಟಿದೆ. ಇನ್ನೂ ಳುವದು ಉಳಿಯಿತೆಂದು ಶಿಕ್ಷಕರು ಅಸಮಾಧಾನಪಡದೆ ಪ್ರಾರಂಭದಲ್ಲಿ ್ಯಾರ್ಥಿಗಳ ಮುಂದೆ ವಿಷಯವನ್ನು ಹೇಗೆ ಇಡಬೇಕೆಂಬ ವಿಷಯದಲ್ಲಿ ಅ ಗೆ ಜಾಗರೂಕರಾಗಬೇಕು. ಉದಾಹರಣೆಗಳು ಇಲ್ಲಿ ಕೊಟ್ಟಷ್ಟೇ ಬಗೆಯದೆ ಅಂತಹ ಇನ್ನೂ ಹಲವು ಉದಾಹರಣೆಗಳನ್ನು ರ್ಥಿಗಳ ಮುಂದೆ ಇಡಬೇಕು. ಇಲ್ಲಿ ಕೊಟ್ಟ ಅಭ್ಯಸನಗಳನ್ನಲ್ಲದೆ ಭ್ಯಸನಗಳನ್ನು ಹೇಳಿ ವಿಷಯವು ದೃಢವಾಗುವಂತೆ ಮಾಡಬೇಕು. ರ ಮೇಲೆ ವ್ಯಾಕರಣವನ್ನು ಕೇಳಿಕೊಳ್ಳುವಾಗ ವಿದ್ಯಾರ್ಥಿಗಳು ತಾವು ತಿಳಿದುಕೊಂಡ ವಿಚಾರಗಳನ್ನಷ್ಟೇ ಹೇಳಬೇಕಲ್ಲದೆ ಅವರಿಗೆ ತಿಳಿಯದ ಸಮಾ ಕಾರಕಾರ್ಥಗಳು ಮುಂತಾದವುಗಳನ್ನು ಅವರು ಹೇಳಬೇಕೆಂದು ಗಿಡ ಸಬಾರದು. ಹೊಸ ಅಭ್ಯಾಸಪತ್ರಿಕೆಯನ್ನನುಸರಿಸಿ ಈ ಆವೃತ್ತಿ ತಾ "ಸಾಮಾನ್ಯವಾಕ್ಯಗಳ ವಿಭಜನೆ" ಈ ಪ್ರಕರಣವು ಅನುಬಂಧ(೧) ವ ಪವಾಗಿ ಸೇರಿಸಲ್ಪಟ್ಟಿದೆ. ಮುಂದುವರಿದ ವಿದ್ಯಾರ್ಥಿಗಳಿಗಾಗಿ ಕೊನೆ ಲ್ಲಿ ಸಮಾಸ ಪ್ರಕರಣವು ಕೊಟ್ಟಿದೆ.

# ಪ್ರಕಟನೆ.

## ಪಂ. ಪೂಜಾರ ಕೃತ

| | |
|---|---|
| ಸತ್ಕಥಾಲಾಪ ( ಟೆಕ್ಸ್ಟ ಮತ್ತು ಸಪ್ಲಿಮೆಂಟರಿ) | ೦–೧೪–೮ |
| ಸದ್ಗುಣಾದರ್ಶ | ೦–೧೦–೦ |
| ೩ನೆಯ ಭಾಗ ನುಡಿಗನ್ನಡಿ ಹೊಸ ಅಭ್ಯಾಸಪತ್ರಿಕೆಯಂತೆ ೬–೭ನೆಯ ಇಯತ್ತೆಗಳಿಗೆ | ೧–೧–೦ |
| ೨ನೆಯ ಭಾಗ ನುಡಿಗನ್ನಡಿ ಹೊಸ ಅಭ್ಯಾಸಪತ್ರಿಕೆಯಂತೆ ೫ನೆಯ ಇಯತ್ತೆಗೆ | ೦—೬–೦ |
| ವಾಚನಪಾಠಮಾಲೆ ಮತ್ತು ಕವಿತಾಪಾಠಮಾಲೆ (ಟೆಕ್ಸ್ಟ) | ೧—೧೨–೦ |

ಈ ಪುಸ್ತಕಗಳು ಗ್ರಂಥಕರ್ತರಲ್ಲಿಯೂ, ರಾಮಾಶ್ರಯ ಬುಕ್ ಡಿಪೋ ಸ್ಟೂಡಂಟ್ಸ ಓನ್ ಬುಕ್ ಡಿಪೋ ಧಾರವಾಡ, ಮತ್ತು ಬೇರೆ ಎಲ್ಲ ಬುಕ್ ಡಿಪೋಗಳಲ್ಲಿಯೂ ದೊರೆಯುವವು.

* * *

**ಸೂಚನೆ :—** ಈ ಪುಸ್ತಕದ ವಿಷಯಾನುಕ್ರಮ, ವ್ಯಾಖ್ಯೆ, ವಾಕ್ಯ, ಮುಂತಾದವುಗಳನ್ನು ತಮ್ಮ ಪುಸ್ತಕದಲ್ಲಿ ಹಾಕಿಕೊಂಡವರು ನಷ್ಟಕ್ಕೆ ಗುರಿಯಾಗುವರು.





ಧಾರವಾಡದಲ್ಲಿರುವ
ವಸಂತ ಮುದ್ರಣಾಲಯದಲ್ಲಿ [illegible]. ಆರ್. ಜಿ. ಹುಕ್ಕೇರಿ, ಪಿ.
[illegible]. ಎಸ್. ಎಲ್. ಜೋಶಿ, ಇವರು ಮುದ್ರಿಸಿದರು. ಗುವಪ್ಪ
ಮಲ್ಲಾರ ಗಣೇಶ ಪೂಜಾರ ಇವರು ಧಾರವಾಡದಲ್ಲಿ ರೂಪ
ತಮ್ಮ ಮನೆಯಲ್ಲಿ ಪ್ರಕಟಿಸಿದರು.



" ಚಿತ್ರ ೬-"ಚಾರ"



ಚಿತ್ರ ೭-" ಪಃಚ "

## ನಮಸ್ತೆ-ಕವಾಯಿತ

ಚಿತ್ರ ೮-" ಹುಶ್ಯಾರ



ಚಿತ್ರ ೯-" ನಮಸ್-ತೆ"



ಪ್ರಕಾಶಕರು

ಲಕ್ಷ್ಮಣ ಸುಬ್ಬರಾವ ಹರ್ಡೀಕರ

೭೫೩, ಸದಾಶಿವ ಪೇಠ, ಪುಣೆ ೨



ಪುಸ್ತಕಗಳು ದೊರೆಯುವ ವಿಳಾಸ

ಕಾರ್ಯದರ್ಶಿ

“ಧ್ವನಿ ಮಂಡಲ”

ಹುಬ್ಬಳ್ಳಿ